# ಉತ್ತರೋತ್ತರಣಿ

**ಮಲ್ಲಿಕಾ**

ಯೋಗರತೋ ವಾ ಭೋಗರತೋ ವಾ
ಸಂಗರತೋ ವಾ ಸಂಗವಿಹೀನಃ ॥
ಯಸ್ಯ ಬ್ರಹ್ಮಣಿ ರಮತೇ ಚಿತ್ತಂ
ನಂದತಿ ನಂದತಿ ನಂದತ್ಯೇವ ॥

॥ ಶ್ರೀ ಶಿವಪಾದಾರ್ಪಣಮಸ್ತು ॥

# ಉತ್ತರೋತ್ತರಣೆ

ಮಲ್ಲಿಕಾ

ಲಕ್ಷ್ಮೀ ಪ್ರಕಾಶನ
170, ಲ್ಯಾಂಗ್ ಫೋರ್ಡ್ ರೋಡ್
ಬೆಂಗಳೂರು–560 025

# ಪರಿವಿಡಿ

# ಉತ್ತರೋತ್ತರಣಿ

ಜಗದ್ಸೃಷ್ಟಿಯಲಿ ಪರಮಪದವೆಮಗೆ
ನರಜನುಮದೊಳೊಗೆದುಪಕರಿಸೆ ನೀ,
ಹೇ, ದೇವಾದಿದೇವ! ಜಗತ್ಕಾರಣ!
ನೆರೆ ನಂಬಿದೆನ್ನೈ ನಿನ್ನ, ಇಂತೊಂದು
ನರಜನುಮದುದ್ಧರಣವ ಬಯಸಿ,
ಹೇ, ದೇವಾದಿದೇವ! ಜಗತ್ಕಾರಣ!
ಭವ್ಯ ಭವಿತವ್ಯವಂ ನೆನೆನೆನೆದು
ಗೆಲುವಾಸೆಯಿಂದೆ ತವ ತಪಸ್ಯೆಯಂ
ನೋಂತೆನ್ನೈ ಭವನೋವಂ ಕಡೆಗಣ್ಚಿ.
ದಿನದಿನದ ನಂಜಿನೂಟೆಗೆ ಶಾಂತಿ
ಸುಖನಿಧಿಯ ಲೇಪವನೊತ್ತಿಯೊತ್ತಿ
ಥಳಫಳಿಸಿ ಲೋಕದ್ಸೃಷ್ಟಿಗೆ ಹಿತವೆನೆ
ಬಾಳ್ದೋಣಿಯ ಚುಕ್ಕಾಣಿವಿಡಿದೆನ್ನೈ
ಮನಃಪ್ರಾಣಗಳೋಜೆಗೆ ವಿತ್ತಾಗಿ!

ಇರ್ಕೆ, ಸರಸ್ವತೀ ಆಲಯವಿರದಾ
ತಾಣದೊಳ್ ತಾಯ್ಕೃಪೆ ಪಡೆಯಲ್ಕೆ
ಎನಿತೊಂದು ಕೂರ್ಮೆಯೋ ಅನಿತನಿತು
ಭಂಗಬವಣೆಯೆನೆ ಭಾವಿಸಿ ನೋಡ!
ಸಂದುವಾ ದಿನಗಳ್ ಭವ ಬಂಧನದಿ
ಕಂಬನಿಯ ಕೋಡಿಯ ಚೆಲ್ಲಿಸೂಸಿ.

ಹೇ ಬ್ರಹ್ಮನರಾಣಿ ಸರಸತಿಯೇ!
ಅಂತುಮಿಂತು ಕಡು ಸಂಕಷ್ಟದಲಿ
ಬಾಳ್ವಿಯಂ ಕೆಳೆಕೊಂಡೊಡಂ, ನಿಮ್ಮ

ಪಾದ ಸೇವೆಯ ಹಂಬಲದಿಂದಲಿ
ಅಕ್ಕರೆಯೊಳಾಂ ತಬ್ಬಿ ಅಕ್ಕರವ,
ಕಿಂಚಿತ್ ಸಲಿಸಿದೆನ್ನೈ ತವರಿಣಂ !
ಇಂತಪ್ಪ ಭಂಗದಿಂದೊಡೆದ ಕೃತಿಯಂ
ಪರಸಿ ನಾಗೈದ ಕಿರುಪೂಜೆಯಂ
ಕೈಕೊಂಡು ಕದಡಿದ ಬಗೆಗಿನಿತು
ಶಾಂತಿ ಸೇಚನೆಗೈದು ನಿನ್ನ ನಿಲು-
ವನೆಯ ಕಿರು ಮೂಲೆಯಲಿನಿತು ನೆಲೆಯ
ನೀಡಿದೊಡೆ ಸಾಕೆನಗೆ ಸರಸತಿಯೇ !
ಕೊನೆವರಂ ನಿನ್ನ ಘನ ಸೇವೆಯೆಮ
ಇಂತೆ ನಲ್ವರಿದು ಸಾಲ್ವರಿದು ಮೇಣ್
ಭೋರ್ಗರೆದು ಫೇನ ಬುದ್ಬುದವನೊಟ್ಟ
ಹರಿಯಲಿ ಉತ್ತರೋತ್ತರಣೆಯಾಗಿ !
ಕವಯತ್ರಿ ಮೈಮನಂ ಪುಳಕಿಸುಪೊಲ್ !!

—o—

# ಸುಪ್ರಭಾತ

ಮುಂಬೆಳಕು ಮೂಡಣದಿ ಮೂಡುತಿರೆ
ತಣ್ಣನೆಯ ತಂಗಾಳಿ ಬೀಸುತಿದೆ
ಹೇ ಸಹಸ್ರ ನಾಮದ ಶ್ರೀಪುರುಷನೆ
ಏಳು ಏಳಯ್ಯಾ ಬೆಳಗಾಯಿತು !

ಪಕ್ಷಿಗಳ್ ನಿಚ್ಚ ನೇಮದಿಂದಲಿ
ಕೊರಳೆತ್ತಿ ಪಾಡುತಿವೆ ಹೇ ಪ್ರಭುವೆ,
ಕೇಳ್ಳೈ ದನಿಯ ವರ ಮಂಗಳ ದನಿಯ !

ಸುರ ನದಿಯೊಳ್ ವರಭಕ್ತರು ಮಿಂದು
ಕಾದಿಹರು ನಿನ್ನ ದರುಶನಕೆಂದು
ಬೇಸರಿಸದೇಳಯ್ಯ ಶ್ರೀವರನೆ !

ಹೇ ವಸುದೇವ ನಂದನ ಕೈಮುಗಿದು
ಬೇಡುವೆ ತಡಮಾಡದೆ ಓಡಿಬಂದು
ಬೇಡಿದರ ಬವಣೆ ಪರಿಹರಿಸಯ್ಯ ದೊರೆಯೆ !

—೦—

# ಅಸ್ತಮಾನ

ಅಭ್ರಮಣಿಯ ಚಿತೆಯಗ್ನಿಯೊ ಏನೆ ಕನಕಕಾಂತಿ
ಪೊಳೆದತ್ತು ಪಡುಸೀಮೆಯ ಸುನೀಲ ಭಿತ್ತಿಯಲಿ !
ಗೋಧೂಳಿಯೆದ್ದು ಹೊನ್ನ ತೆರೆಯೊಲ್ ಏರುತಿರೆ
ನಭದೊಲ್ಮೆಯಲಿ ಎನಲ್ಕೆ, ಸಾಯಂಸಮಯದಾ
ಗಡಿಬಿಡಿಯು ವ್ಯಾಪಿಸಿದುದು ಧರಣಿಯಲೆಲ್ಲೆಡೆಯು.
ಗೂಡನರಸುವ ವಾಯಸವಳಗಂ ಗಗನದೊಳ್
ಸುಳಿಸುತ್ತಿ ಹಾರಾಡಿ ಬಾಯ್ ಕಿಸಿದು 'ಕಾ, ಕಾ'
ಎಂದೊರಲ್ದು ಕರ್ಕಸ ರಾಗಮಂ ಎಡೆವಿಡದೆ
ಪರಿಸುತಿರೆ, ಇಂತಿದಾವ ಕೂರ ಅಪದೇಶೆಯಂ
ಅರಿತು ಕೂಗಿ ಒರಲ್ದೊರಲ್ದು ಪೇಳ್ದಪುದೊ ಘನ
ತರ ಸಂಕಟದಿಂದಲಿ ಎನಲಾ ಅಪಸ್ವರಂ
ಪೊಣ್ಮಿದುದು ಮತ್ತೆ ಮತ್ತೆ ! ಕೇಳ್ದ ಮಡಿವಂತರ್
ಇದೇಕೆ ಗಾವರಂ ಎಂದೆಂಬ ಸಂಕೆಯಾ
ಗೊಂದಣದೊಳ್ ತೆಕ್ಕನೆ ಮನವಿಟ್ಟು ಮತಿಗೆಟ್ಟು
ಚಿತ್ತವಿಕಲ್ಪದಿಂ ತಳಮಳಿಸಿ ಹೋಹನಿತು
ವಿಕಟಮಾ ಸನ್ನಿವೇಶಂ ! ಆಗಳ್ ಪಡುವಣದಿ
ಪೊನ್ನೇಸರ್·ಜಗಜಗಿಸಿ ಒಯ್ಯನಿಳಿಯುತಿರೆ
ಅಪರವಾರ್ಧಿಗೆ, ಸೀಮಾಕ್ಷೇತ್ರದ ಮುಗಿಲ್ದೊರೆ
ಹಾದಿಗಡ್ಡೈಸಿ ಬರಲ್ ಕೆಮ್ಮನೆ ತೆರೆಮರೆಯಲಿ
ವಿಶ್ರಮಿಸಿದಂ. ವಿಶ್ವ ಸಮುದಾಯದಿ ಜಣಜಣಂ
ಭುಗಿಲೇಳ್ವ ತರತರದ ಕಷ್ಟ ಕಾರ್ಪಣ್ಯಮಂ
ಈಕ್ಷಿಸಲಾರದೊಲ್. ಮತ್ತಮಾ ಬ್ರಹ್ಮಾಂಡ
ಚಕ್ರದಲಿ ಕ್ರಮವತ್ ಸುಳಿಸುತ್ತಿ ಅನುತಪ್ತ

ವಾಯುವಿನ ಉದ್ವೇಲ ಧ್ವನಿ ಸುಯ್ ಸುಯ್ಯೆನಲ್
ಪೊಣ್ಮಿದುದು ಶೋಕರಸ ತಾನತಾನ ವಿತಾನಂ !
ಇಂತಪ್ಪ ಪಕ್ಷಿಗೊರಳ ಸಂಧ್ಯಾರಾಗದೊಳ್
ರಸಮಾಧುರ್ಯಮಿನಿತಿಲ್ಲಂ? ಒಡಕು ಸ್ವರದೊಲ್
ಪರಿದಿದೆ ಮೂಕಮೌನ ನಿವೇದನಾ ವಿಶೇಷಂ !
ಅಹ, ಸರೋವರ ಜಲದಿ ತಾವರೆಗಳ್ ನೇಸರ್
ಮುಳುಗುವಾಮುನ್ನಮೆ ಮುದುಡುತಿವೆ; ಇದೇಂ ಕಷಂ ?
ಮನಂಗೆತ್ತ ಭಾವಭಾರಮೊ ? ಶೋಕ ಭಾರವೊ ?

ಇಂತಿದಂ ನಿರುಕಿಸಿದೊಡೆ ಎಲ್ಲೆಡೆ ಕಳವಳಂ
ಕಂಡುಬರುತಿರ್ಕ್ಕುಂ. ಇದಾವ ದುರ್ನಿಮಿತ್ತವೊ
ಮತ್ತಾವ ಕಾರಣವೊ ತಿಳಿಯಲಾಸಲ್ಲ ಕಣ !
ಭರತಮಾತೆಯ ಪಾರತಂತ್ರ್ಯವ ಕಳೆದ ಜನರ್
ಸೊಗದ ಸುಧೆಯೊಳ್ ಮುಳುಗಿ ತೇಲಾಡಿ ಓಲಾಡಿ
ಜೀವನದ ಪ್ರಗತಿ ಪಥದೊಳ್ ನಡೆಯುತಿರೆ ಪರ
ದೇಶದಾ ಲೋಗರೊಳ್ ಸ್ಪರ್ಧೆಗೆತ್ತು. ಇಂದೇಂ
ತೆಕ್ಕನೆಳ್ದುದು ಗಡಿಬಿಡಿಯ ಪೊಚ್ಚ ಗಾವರಂ
ಎಲ್ಲೆಡೆಯೊಳ್ ? ಪ್ರಕೃತಿಗಾವರವೊ ಜೀವಗತಿ
ಗಾವರವೊ ? ಏನುಮೇನೆಂದು ಅರಿಯದೆ ಮನಂ
ಮಿಡುಕುತಿದೆ ಪ್ರಾಣಕೋಶಮಂ ನಡುಗಿಸುವಂತೆ !
ಸಾಯಂಸಮಯದಾ ಸುಮಧುರ ಸಾಮ್ರಾಜ್ಯದಲಿ
ಚಂದ್ರ ಕೀರುತಿ ಮೈದೋರೆ ಎಲ್ಲೆಡೆ ಪರ್ವಿದುದು
ಧವಳಿಮಾ ಶೋಭಾ ಶೈಲಿ. ಶಾಂತಿ ಸಂಪದಮುಂ
ಮಿಾರಿ ! ಏಂ ಸಾಯಂ ಸೊಂಪು ? ಏಂ ತಣ್ಪಿನಿಂಪು ?
ಆದೊಡೇಂ ? ಎಲ್ಲಿಯದೊ ಒಡಕು ಸ್ವನಂ ಮೇಣ್

→

ಸಂಕಟದ ಸುಯ್ಲ್ಲ ಎಲ್ಲೆಡೆಯುಂ ಪರ್ಬಿದವೊಲ್
ಕಳವಳ ಕಣ! ದುಃಖ ಕಣ! ಅಶಾಂತಿ ಕಣ!
ಓವೋ!

ಕೋಗಿಲೆಯ ಕೊರಳ ತೂರ್ಯವಾಣಿ ಪೊಣ್ಮಿತು ಕೇಳ್!
ಅದೇಂ ನುಡಿಯುತಿದೆ? ಏನದರ ಪರಿಭಾಷೆ? ಏಂ
ತಿಳಿಯ! ಎಂದಿನಂತಿಲ್ಲದರ ಸ್ವರ ವಿಧಾನ!
ಏಂ ಕಾರಣವೊ? ಏಂ ಅನರ್ಥವೊ? ಇನ್ನೇಂ ಘೋರ
ದುರಂತವೊ? ಭಾರತದ ವಿಜಯ ಸಾಧನಾಸಿರಿ–
ಯುನ್ನತಿಯ ಮೇಲೆ ಆವ ಮಸಿಯೊರತೆಯು ಚಿಲ್ಲಿ
ಲೋಕದೊಳ್ ನಗೆಗೇಡಿಯಾಗಲಕ್ಕುಮೊ ಪೇಳ್?

ಅದೊ, ರಾಮಧುನಿ! ಭಕ್ತಿರಸ ಉಕ್ಕಿಹರಿವ ಶ್ರೀ
ರಾಮಧುನಿ! ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿ
ಶಿಷ್ಯಮಂಡಲಿಯೊಡಂ ಸಾಯಂ ಭಜನೆಗೆಂದು
ಬರುತಿಹ ನೋಡ! ಎಡಬಲವಕ್ಕಗಳಲಿ ಬಿಳಿಯ
ದುಕೂಲವುಟ್ಟ ಹಾಲ್ಮೊಗದ ಪೆಣ್ಮಕ್ಕಳಂ ತಬ್ಬಿ,
ನಲ್ಮೆಯಿಂ ಬಲ್ಮೆಯಿಂ ಮೊಗರವಳ್ಳಿ ನಡೆದಿಹ
ಶಾಂತಿ ಸುಧೆಯಲಿ ಮಿಂದು ಶಿಷ್ಯರಿಗೆ ಗುರುವಾಗಿ
ಸಹಪಾಠಿಗಳಿಗೆ ಗೆಳೆಯನಾಗಿ. ಜಗತ್ತಿಗೆ ತಾಂ
ಪೂಜ್ಯನಾಗಿ!

ಬೋಲೋ ಶ್ರೀರಾಮ ಮಂಗಳಧುನಿ!
'ರಘುಪತಿ ರಾಘವ ರಾಜಾರಾಂ ಪತಿತಪಾವನ
ಸೀತಾರಾಂ. ಈಶ್ವರ ಅಲ್ಲಾ ತೇರೇ ನಾಂ ಸಬಕೊ
ಸನ್ಮತಿ ದೇ ಭಗವಾನ್!'



ಅಹ, ಪೌರ್ಣಿಮೆತಲಾ ನಲ್
ಕಂಠಗಳಿಂ ಭಕ್ತಿ ಸುಧಾಸೂಸಿ ಪ್ರೇಮಮಯುದಿಂ !
ಒಕ್ಕೊರಲಿನ ಭಜನೆಯೊಳ್ ಸಾಗುತಿಹೆ ಪಯಣಂ
ಭಜನಮಟ್ಟೆಯುಂ ಕುರಿತು ಏಂ ಜನ ? ಏಂ ಪುರುಪು?
ಏಂ ಭಕ್ತಿ ಭಾವಂ ? ಜನಪದಂ ಹಿರಿದು ಕಿರಿದು
ಭೇದವಿಲ್ಲದೆ ಸ್ತ್ರೀಪುರುಷ ಭಿನ್ನತೆಯಿಲ್ಲದೆ
ಒಟ್ಟಾಗಿ ಒಕ್ಕೊರಲಿನ ರಾಮಧುನಿಯೊಳ್ ಮೈ
ಮರೆಯೆ ಲೋಕ ಕಲ್ಯಾಣವೆ ಮೂರ್ತಮಾದುದೊ
ಎನಲ್ಕೆ ಜನಪದ ಮಧ್ಯೆ ಭಾರತಪಿತ ರಾಮ
ಧುನಿಯಲಿ ತಾಂ ಮೈಮರೆತು ನಡೆದಿಹ ಪುಟಗೊಂಡ
ಸ್ವರ್ಣಸಲಾಕೆ ನಡೆತಂದವೊಲ್ ! ಅಗಳಾ ಜನ
ಕೈಮುಗಿವುದ ನೋಡಾ ! ಕಾಲ್ವಿಡಿವುದ ನೋಡಾ !
ಅಹಹ, ಏಂ ಭಕುತಿ ? ಏಂ ಗೌರವಂ ? ಏಂ ಮೋದಂ ?
ಮತ್ತಿದೇಂ ಆವೊಂದು ಭಕ್ತಿ ಗೌರವಗಳ ಮಹಾ
ಮಂಡಲಿಯ ಮಧ್ಯೆ ಸುಳಿಸುಳಿದಾಡಿತೊತ್ತಂದು ನರ
ರೂಪದ ಕುಮತಿಯು ತಿಳಿಗೇಡಿ ಜೀವಂ ? ಕೈಯೊಳ್
ಸುಡುಗೋಲಿಯುಗವ ಕಲಿಕಾಲದ ಕಟುತರದಾ
ಕಿರುಗೋವಿಯುಂ ಪಿಡಿದು ! ಹಾ, ಭಜನಕಾರರು
ಗಮನಿಸಿದರೆ ? ಗೆಣೆಯರ್ ಬಗೆದರೇಂ ಇಂತಪ್ಪ
ದುರಂತಮಿಹುದೆಂದು ! ಪೆಂಗಳೆಯರ್ ಕಂಡರೇಂ
ರಾಷ್ಟ್ರಪಿತನಿಂದು ಧರೆಗೊರಗುವನೆಂದು ? ರಾಜ್ಯ
ಸೂತ್ರಕಾರರ್ ಅರಿತರೇಂ ?
ಹಾ, ಆ ತಿಳಿಗೇಡಿ
ಮೈಬಾಗಿ ಶರಣೆಂದು ಭಕುತಿ ಭಾವಂ ತೋರಿ

→

ಇಕ್ಕಿದಂ ಸುಡುಗೋಲಿಯಂ ರಾಷ್ಟ್ರಪಿತನೊಡಲಿಗೆ
ಧರ್ಮದ ಕೊರಳಂ ಕೊಯ್ವಂತೆ, ಸತ್ಯವ ಮೆಟ್ಟಿ
ತುಳಿವಂತೆ ! ಹೆತ್ತೊಡಲಿಗೆ ಚೂರಿಯನಿರಿವಂತೆ !
'ಹೇ ರಾಂ ! ಹೇ ರಾಂ ! ಎನುತ ಧರೆಗುರುಳಿತ್ತೈ
ಧವಳ ಕೀರ್ತಿಯ ವರ ಶಿಖರ ! ಹಾಹಾ ! ಎಂದುದು
ಜನತೆ ! ಹೋ ಎಂದೊರಲ್ದುದು ಕರುಣ ಕಂಠ ! ಭಜನ
ಗೇಯುದಲಿ ಪೊಣ್ಮಿತ್ತೈ ರಣಗೋಳು ! ಹಾ, ಬಾಪೂ !
ಹಾ, ರಾಷ್ಟ್ರಪಿತ ! ವಿಶ್ವನೇತಾ ! ಇಂತಡರಿತೆ
ನಿನ್ನಂತ್ಯ ? ನಿನಗಣಂ ಶತ್ರುಗಳಿದ್ದರೆ ಜಗದಿ ?
ಎಂದುವೆಂದು ಕಂಬನಿಕೋಡಿವರಿಸಿತ್ತೈ ಜನತೆ.
ಹಾ ! ಚೀರ್ದುದು ಖಗವೃಂದ ! ನಾಯಿಗಳ್ ಪೂರ್ವಕೆ
ಮೊಗವಿಟ್ಟು ಊಳಿಟ್ಟುವು ! ರವಿ ಅಪರ ದೇಶಕೆ
ಒಯ್ಯನಿಳಿದು ಮುಖ ಮರೆಸಿಕೊಂಡನ್ನೈ ಜಲಧಿಯಲಿ !
ಮತ್ತೆ ಮೊಳಗಿತು ರಾಮಧುನಿ ಶೋಕರಾಗದಲಿ !
'ರಘುಪತಿ ರಾಘವ ರಾಜಾರಾಂ ಪತಿತ ಪಾವನ
ಸೀತಾರಾಂ. ಈಶ್ವರ ಅಲ್ಲಾ ತೇರೇನಾಂ ಸಬಕೊ ಸನ್ಮತಿ
ದೇ ಭಗವಾನ್ !!

ಶಾಂತಿಯಿಂ ವೀರ ಮರಣವಪ್ಪಿ
ಭೂಮುವಾಯ್ತೋ ದಿವ್ಯಚೇತನ ! ಭಾರತೀಯರಂ
ತೊರೆಯಲಾರದ ಗಾಂಧೀಚೇತನ ಏಗಳುಂ
ಭಾರತೀಯರ ಬಳಿಯೆ ಸುಳಿಸುತ್ತಿ ಒಳಗಣ್
ತೆರೆಸೆ ಸರ್ವತ್ರ ಬಯಸುಗುಂ ಕಣ ! ಅದನರಿತು
ಬಾಳಿರೈ ಹದವನರಿತು ಭಾರತೀಯ ಮಕ್ಕಳಿರಾ !
ಕೇಳಿ ಚಿಣ್ಣರಿರಾ ! ಕವಿಸೊಲ್ಲಿನ ಕರೆ ಕೇಳಿ !

ಅಯ್ಯಾ. ನಾಥೂರಾಂ ಗೋಡ್ಸೆ ! ನಿನಗಿಂತಪ್ಪ
ಸುನಾಮವನಿಡುವೊಡೆ ಎನಿತು ಭವ್ಯ ಭವಿಷ್ಯದ
ಕನಸು ಕಂಡಿದ್ದಳೋ ನಿನ್ನಯ ಜನನಿ ? ಅದಂ
ಈ ರೀತಿಯೊಳ್ ಗೆಯ್ದು ಉಪಕರಿಸಿದೆಯಾ ಧೀರ ?
ಹಾ, ಅಮಾನವೀಯ ಹೀನ ಗುರಿಯನೇನೆಂಬೆ ?
ನರಜನುಮದೊಳ್ ಪುಟ್ಟ ನರಾಧಮನಾದೆಯಾ ?
ಅರಿತರಿತು ಕಲಿತು ಏಂಗೈದೆ ಕಾಪುರುಷ ? ನೀಂ
ಹೃದಯ ರಹಿತ ! ಯುವಾ ದೃಷ್ಟಿಕೋನವಿಂತುಟು
ಕ್ರೂರವೆ ? ವಿಚಾರ ಹೀನವೆ ? ಇಡೀ ಭಾರತದ
ಪ್ರೀತಿಯಾಗರಂ ಓರ್ವನ ಕುಮತಿಯ ಕುತ್ಸಿತ
ದಿಟ್ಟಿಗೆ ಬಲಿಯಪ್ಪುದಃ ನ್ಯಾಯಮೆ ? ನೀತಿಯೆ ಪೇಳ್?
ಏಂಗೈದೆ ? ಏಂಗೈದೆ ? ಮಹಾಪಾತಕಿ ! ಪರಮ
ಕೇಡಿ ! ಚಂದ್ರಶೀತಲ ಶಾಂತಿಯಂ ಸಹಿಸದಿರೆ
ಬೇರಾವುದಂ ಸಹಿಸಲಕ್ಕು ? ಕಲ್ಪವೃಕ್ಷವ
ಕಡಿದು ಕೆಡಗುವರೆ ಹೀನ ಮನುಜ ? ಭಾರತದ
ಸರ್ವೋದಯದಮೃತಪ್ರಪಾನದೇಕ ಪ್ರಪಾ
ಮಂದಿರವನೊಡೆಯಲ್ಕೆ ಕೈಯೆಂತು ಸಂತು ಪೇಳ್ ?
ಸರ್ವಧರ್ಮಸಮನ್ವಯಾಚಾರ್ಯನಂ ಕೊಲಲ್
ಮನವೆಂತೊಪ್ಪಿತು ಪೇಳ್ ? ಸಮಸ್ತ ದೇಶವಂ
ಬೆಳಗಿಪ ದಿನಕರನಂ ಸಹಿಸಲಾರದೆ ಪೋದೆಯ ?
ಮಹಾತ್ಮರೊಳ್ ಮಹಾತ್ಮ ಋಷಿಗಳೊಳ್ ಋಷಿ ಎಂತು
ಕ್ರೂರನಾಗಿ ತೋರ್ದ ನಿನ್ನಯ ಬಗೆಗಣ್ಣಿಗೆ ಪೇಳ್ ?
ಚಂದ್ರ ಪ್ರಶಾಂತಿಗೆ ರಾಹುಕೇತುವಾದೆಯ ಹೀನ

→

ಮನುಜ! ಮನಸಾಕ್ಷಿಯಾರಿ ಕೈಕೊಳ್ಳುವೊಡೆ
ಕೊಲೆಯಂ ಎದೆಯೆಂತು ಸಹಿಸಿತು ಪೇಳಾ? ಅಜಾತ
ಶತ್ರುವಿಂಗೆ ಶತ್ರುವೈಸೆ ಪೆತ್ತು ಸಲಹಿದಳೇಂ
ನಿನ್ನ ಜನನಿ? ಮನುಷ್ಯತ್ವಕ್ಕೆ ಮುಳ್ಳೆನೆ ಪುಟ್ಟಿ
ಭಾರತೀಯತ್ವಕ್ಕೆ ವಿಷವೆನೆ ಬೆಳೆದೆಯಲ್ಲೊ
ಪುಣ್ಯ ಭೂಮಿಯಲಿ? ಮಹರ್ಷಿಗಳ ಪವಿತ್ರನಾಡಿನ
ಹೃತ್ಕುಮುದವರಳ್ವು ಬಿರಿಯುತಿರಲ್ ಸೊಗಯಿಸಿದ
ಸ್ವಾತಂತ್ರ್ಯ ಕಸ್ತೂರಿಯ ಪರಿಮಳದಿಂಪಿಗೆ ಕರುಬಿ
ತರಿದೆಯ ದೇವ ಕಾಂಚನ ಪ್ರತಿಮೆಯಂ? ಅಕಟಕಟಾ!
ಕಲಿತು ಲೋಕಜ್ಞನ ಕೊಂದೆ! ನುರಿತು ನರೋತ್ತಮನ
ಕೊಂದೆ! ಬಲಿತು ಲೋಕವಂದ್ಯನ ಕೊಂದೆ! ಭಾರತ
ಜನನಿಯ ಬಂಧಮೋಚನೆಗೈದ ಪರಮ ಪುತ್ರನ
ಕೊಂದೆ! ವಿದ್ಯಾವಂತನೆನಿಸಿ ವಿದ್ಯಾಸರಸ್ವತಿಯ ಕೊಂದೆ!
ಭಾರತಾಬ್ಧಿಯದು ಸಾಲ್ದಾಗಿಮೆ ತೊಳೆಯಲೀ ಘೋರ
ಪಾಪಂ? ಗಗನಭಿತ್ತಿಯುಂ ಸಾಲ್ದಾಗಿಮೆ ಮುಚ್ಚಲೀ
ಪಾತಕಂ? ಒಡಲುರಿದು ನರಳ್ವರ ದಾಹ, ನೊಂದು
ಕಂಬನಿಗರೆವರ ಅತುಲ ಸಂಕಟ, ಕನಲುವರ
ಭೀಮ ಸ್ವಪ್ನ ಕಳೆಯಲರಿಯ ಪಾವಕಂ! ಅಕಟ!
ಕಾಲಧರ್ಮ ಇಂತಪ್ಪ ದುರ್ಗತಿಗೆ ಕಾರಣ ಕಣ!
ಪೆತ್ತರ್ಗೆ ವಿಷವೂಡಿಪೊಂದು ಕಲಿತನ ಕಣಾ!

ಹಾ, ಅರ್ಥಹೀನ ಭಾವಕೋಶದಲ್ಲಿ ನೀನೇಂ
ಅರ್ಥೈಸಿದೆಯೋ ಕಾಣೆ. ನಿನ್ನಾಸೆ–ಅಭಿಲಾಷೆ
ಏನಿರ್ದೊಡೇನು? ಇಂತೀ ಹೇಯ ಕೃತ್ಯಂ
ಆತ್ಮ ಸಂತೃಪ್ತಿಗೆ ಮೋಕ್ಷ್ ಮನಶ್ಶಾಂತಿಗೆ ಮಿತ್ತು ಕಣ!

→

ಹಗಲಿರುಳು ಸ್ವಾತಂತ್ರ್ಯ ಸಮರದಲಿ ಹೋರಿದವಗೆ
ಸ್ವಾತಂತ್ರ್ಯದ ಸವಿಯನಿನಿತುಣಗೊಡಿಸದೆ ಹೋದೆ ;
ಎಲ್ಲೆಲ್ಲದ ಪೆರ್ಮೆಯಲಿ ಜಗದೆದುರು ಎದೆಯಂ
ತಟ್ಟಿ 'ಭಾರತೀಯರು ನಾವು' ಎನುತಿರ್ದಸಿರಿಂಗೆ
ಕೊರಳ್ಕಟ್ಟಿದೆಯು ? ಅರ್ಥಹೀನ ನವಪಂಥವಂ
ಕೈಕೊಂಡು ಭಾರತೀಯತ್ವಕ್ಕೆ ಮಸಿಯೊರೆದೆಯು ?
ಹಾಯ್, ಇಂತಿದಂ ಆರಾದೊಡಂ ಅರಿತಿರ್ದರೆ ?
ಎನಿತು ಕೀಳರಿಮೆ ? ಎನಿತು ಶಂಡ ಭಂಡತನಂ ?
ಎಂತು ಸಹಿಪುದೋ ಜಗತ್ತು ಈ ದುರಂತವಂ !
ಗಾಂಧೀಚರಿತ್ರೆ ಎನಿತು ಕಾಲ ಚಿರವೋ ಅನಿತು
ಕಾಲ ನಿನ್ನ ಕೊಲೆಗತನಂ ಇರ್ಪುದಲ್ತೆ ಕರಿ
ಚುಕ್ಕಿಯೊಲ್ ಭಾರತ ಇತಿಹಾಸ ಪುಟದಲಿ ? ಹಾಯ್ !
ಇರ್ಕೈ, ಎನ್ನೆದೆಯು ಸಂಕಟ ಉರ್ಕುತಿರ್ದೊಡಂ
ಕೊಟ್ಟೆ ಕೊನೆಯೊಳ್ ನಿನ್ನ ಅವಜ್ಞೆ–ಆತುರದ
ಧೂರ್ತತನದಿಂ ಸಂದ ನಷ್ಟಮಂ ನುಂಗಿ, ಇಂ
ಮುಂದಾದೊಡಂ ನಿನ್ನ ಬುದ್ಧಿ ತಿಳಿಯಪ್ಪಿ ನೀಂ
ಪಶ್ಚಾತ್ತಾಪದಿಂ ಕುದಿ ಕುದಿದು ಈ ಪಾಪದಿಂ
ಮುಕ್ತನಾಗೆಂದು ಶಿವನೊಳ್ ಬೇಡುವೆನಯ್ಯಾ !

---

" ಅಸ್ತಮಾನ " ಗಾಂಧೀಜಿಯವರ ನಿಧನ ರಾದ ತರುಣದಲ್ಲಿ ಬರೆದ ಕೃತಿ. ಈ ವರೆಗೆ ಅದನ್ನು ಪ್ರಕಟಿಸಲಾಗದುದು ದುರದೃಷ್ಟ ಕರ. ಗಾಧೀಜಿ ನಿಧನ 30–1–1948

# ರುರು-ಪ್ರಮದ್ವರಾ

ವೇದ ಕಾಲೀನ ಸುಪ್ರಭಾತದೊಳ್ ಆಶ್ರಮ
ವಲಯದಲಿ ಪಚ್ಚಪಸುರೊಸರ್ವ ವನದೇಶಂ
ಪೊಂದಳಿರ್ ಕೆಂದಳಿರ್ ಬೆಳ್ದಳಿರ್ ಎಳೆದಳಿರ್
ಮುಂತಪ್ಪ ನಾನಾದಳಿರಿಂ ರಂಜಿಸಿದತ್ತು
ಕಣ್ಗೆಡ್ಡಮಾಗಿ. ಸಕಲತರ ಪಕ್ಷಿಗೊರಳಿಂ
ಪೊಣ್ಮುವ ವಿವಿಧಸ್ವನಂಗಳ ಉದಯರಾಗದ
ಚೀಂಕಾರ ಓಂಕಾರಮಾಗಿ ಕರ್ಣಮೋಹಕ
ಸ್ತೋತ್ರ ಧ್ಯಾನಗದ್ಗದಮಾದತ್ತು. ಎಳೆವಿಸಿಲ್ ಗಿಡ
ಬಳ್ಳಿ ದ್ರುಮಂಗಳೆಲೆಗಳ ಬಲೆಯೊಳ್ ನಿಣುಕುತೆ
ನೆರಳ್-ಬಿಸಿಲ್ ಚೆಂಬಲೆಯಂ ನೆಯ್ದು ಭೂಮಿಯಂ
ಮುದ್ದಿಟ್ಟು ಪುಲಕಿಸಿತು ಘನ ನಿಬಿಡ ನೀರವತಾ
ವನರಾಜಿಯಂ. ಪೊಳ್ತರೆಯ ತಣ್ಣನೆ ಇಬ್ಬನಿ
ತನಿಯುಂಡ ಗರಿಕೆಯಂ ಮೇಯೆ ಬಯಲಿಗೆತ್ತಾ
ಮಿಗಕುಲಂ ನಲವಿಂದಲಿ ಬಾಯಾಡುತಿರ್ದುವು.

ಎಳೆ ನೇಸರ ಪೊಂಗಾತಿಯು ಮಾರ್ಪೊಳೆದು ಕನಕ
ವಾರಿಯೊಳ್ ಕಂಗೊಳಿಪ ಗಂಗೆಯೊಳ್ ಮುಳುಗಿ ಸುಖ
ಮಜ್ಜನಂಗೆಯ್ದು ವಿಶ್ವಾವಸು ಮೇನಕೆಯರ್
ನದೀ ಪಾತ್ರದ ಸೈಕತ ಶಯ್ಯೆಯಿಂದಾಂಟೆ
ಕಾಲ್ನಡೆಗಳಿಂ ಸಮೆದ ಸಣ್ಣ ವನಬಟ್ಟೆಯಂ
ಪಿಡಿದು ಸಾಗಿದರ್ ತಮ್ಮಾಶ್ರಮಕ್ಕೆ. ಆಗಳ್,
ಶ್ರಾವಣಾಭ್ರದೊಳ್ ಬೆಳ್ಮುಗಿಲ ರಾಶಿಯಮೇಲೆ
ಥಳಥಳಿಸುತಿರ್ದ ಪೊನ್ನೇಸರಂ ಕರ್ಮುಗಿಲ್
ಕವಿದು ತೆರೆಯೊಡ್ಡಿ ಸುಸಿಲ್‌ವಿಸಿಲ್ ಮರೆಯಾಗಲ್

→

ತೊಯ್ದು ತನುಲತೆಗಳ್ ಪಿಂಕಪಿಸಿದುವು ಬೆಳಗಿನ
ತಣ್ಪಿನ ತನಿಮುಟ್ಟೆ! ಇನ್ನೇನಾ ಕುಟೀರಮಂ
ಪುಗುವಂತಿನಂ ಮೇನಕೆ ನುಡಿದಳ್ "ಪ್ರಿಯಕರ!
ಇಳೆಯೊಳಾನಿನ್ನಿರ್ದು ಬಾಳ್ಮೆಯಾ ಬಂಧದೊಳ್
ಸಿಲ್ಕುವುದಸಾಧ್ಯಮೆನೆ ನೀಂ ಕುಪಿತಗೊಳ್ಳದಿರ್
ಆನಿಂದು ಸಗ್ಗದ ಪಥಮಂ ಪಿಡಿದು ಓರ್ವಳೆ
ಪೋದಪೆಂ!"

ಅಂತೆಂದ ಮಾತಿನಿಂ ತೆಕ್ಕನೆಯೆ
ತನುಮನ ಗದಗದ ನಡುಗಿ ಚಿಂತಾಕಾತರತೆ
ಗೆತ್ತ ವಿಶ್ವಾವಸು ಅರಳ್ಗಣ್ಗಳಿಂ ನೋಡಿ
ಕೇಳಿಸಿದನಿಂತು "ಎಲೆ, ರಮಣೀಮಣಿ! ಇಂತೇಂ
ಅವಿಚಾರ ಮಂಥನಂ? ನೀನಿಲ್ಲದಿಳೆಯೊಳ್
ಆನೆಂತಿರಲಕ್ಕು? ಆನೀಕ್ಷಣದೊಳ್
ಬಂದಪೆಂ. ಎನಗುಮೀಧರೆಯೊಳಾವ ಕಜ್ಜಂ
ಇಲ್ಲ ತಿಳಿ!"

ಅದರ್ಕಾವನಿತೆ ಕರುಣ ಕಾತುರ
ದುಂಬಿದ ಮನದಿಂ ನುಡಿದಳ್ ಕೇಳ್, "ಎನ್ನರಸ!
ನೀನಿಂತು ಹಠಸಾಧನೆಗಳಿದೊಡೆ ಏನೆಂಬೆ?
ಎಮ್ಮ ಎಳೆಗೂಸನಾರು ಪಾಲಿಕುಮೀಜಗದಿ?
ಇಂತೊಂದು ಅವಸರಂ ನಿನಗೀಗ ಸಲ್ಲದೈ!"

ಒಡಲ ಕರುಣೆಯಿಂದುಣ್ಮಿದ ವಾಕ್ಸರಣಿಯಂ
ಮುಗಿವನಿತರೊಳ್ ಹಾದಿಯಂ ಕಳೆದು ಈರ್ವರುಂ
ಪರ್ಣಶಾಲೆಯಂ ಪೊಕ್ಕರ್. ಒಳಗೆ ತೊಟ್ಟಿಲಲಿ

→

ಮಲಗಿ ನಿದ್ದೆಗೈದಿರ್ದ ಕೂಸಂ ಕಣ್ತುಂಬ
ನೋಡುತುಂ ವಿಶ್ವಾವಸು ನುಡಿದಂ
ಕೇಳೆನ್ನ
ಮನದನ್ನೆ ! ನಿನ್ನನಗಲಿ ಆನಿರಲಕ್ಕುಮೇ
ಈ ಭುವನದೊಳ್ ? ಈಗಿಂದೀಗಳ್ ಕುವರಿಗೊಂದು
ನೆಲೆಯುಂ ಸರಿದೋರ್ವಾಂ ಬಂದಪೆಂ ನಿನ್ನೊಂಡಂ.
ಉತ್ತರಾ ಪಥವಿಡಿದು ಮುಂದೆ ಮುಂದೆ ನಡೆದೊಡೆ
ನಸುದೂರದಲಿ ಸ್ಥೂಲಕೇಶ ಋಷಿಗಳಾಶ್ರಮ–
ಮಿರ್ಪುದು. ಸಿಸುವಿನೊಡನೆ ನಾವಲ್ಲಿಗುಯ್ದು ಶ್ರೀ
ದರುಶನಂ ಪಡೆದು ನಮ್ಮಿಚ್ಛೆಯಣಂ ಬೆಸಸಿ
ಬೇಡಿದೊಡೆ ದಯೆದೋರುವನಿತು ಘನರಿರ್ಪರಾ
ಮಹರ್ಷಿಗಳ್" ಎನಲ್ಕೆ ತಾಂ ಮನದೊಳ್ ಯೋಚಿಸಿ
ಮಣಿದ ಮೇನಕೆ ಮಗುವಿನೊಡನೆ ಸಂತಸದಿಂದೆ
ಪಿಂಬಾಲಿಸಿದಳ್ ಭವಿಷ್ಯದಲಿ ನಂಬಿಗೆಯಿಟ್ಟು.

ಸೂರ್ಯೋದಯಸುಂದರ ಸಮಯದಿ ಸಿಸುವಳುತಿರೆ
ಮರುಗಿ ಸುಯ್ದುದೆನೆ ಹೊಮ್ಮಿದನಿಲನ ಸುಯ್ಲು
ಕರ್ಣಗಹ್ವರಮಂ ಪುಗಲ್ ಮನಂ ಭವಿಷ್ಯದ
ಕಾರೊಡಲೊಳ್ ಲಯವಾಗಿ ಘನಿಸಿಸಿತು ಆಶಾದ್ರವ್ಯ.
ಘಾಸ ಪಚ್ಚಾರ್ಣವದ ಮಹಾ ವಿಸ್ತಾರದಲಿ
ದೃಷ್ಟಿಯುಂ ನೆಟ್ಟು, ಚರಣರೇಖಾಪಥವಿಡಿದು
ಸೇರಿದರ್ ಸ್ಥೂಲಕೇಶ ಮುನಿವರ್ಯರ ಕುಟಿಗೆ.
ಮತಾತ್ಮಗಳೀರ್ವರುಂ ತಮ್ಮ ಸಿಸುವಂ ಮುನಿಯ
ಪಾದದೆಡೆಯಲ್ಲಿಟ್ಟು ಅತೀ ದೈನ್ಯ ಭಕ್ತಿಗಳ

→

ನೈವೇದ್ಯಮನಿತ್ತು ನಮಸ್ಕರಿಸಿ ಕೈಮುಗಿದು
ಕಣ್ಮುಗಿದು ಕೇಳಿದರಿಂತು ಒಕ್ಕೊರಲಿನಲಿ.

"ಮಹರ್ಷಿಗಳೆ, ನಾಮುಂ ಸಗ್ಗಮಂ ಸೇರ್ವೆವೆನೆ
ಎಮ್ಮಾ ಸುತೆಯುಂ ಕರೆದೊಯ್ವುದೊಂದು ನಿಶಿದ್ಧ-
ಮಾಗಿರ್ದು ಸಂಕಟಮುದಿಸಿರ್ಪುದು. ನೀಂ ದಯದಿ
ಸಿಸುವಂ ಪರಿಪಾಲಿಪ ಕರುಣೆದೋರಿದೊಡಾವು
ಉಪಕೃತರ್" ಎನುತ ನಮಿಸಿದರ್ ಮತ್ತೆ, ಮತ್ತೆ.

ಆಗಳಾ ಸ್ಥೂಲಕೇಶ ಮುನಿವರ್ಯ ಮುದ್ದು
ಕೂಸನೊಮ್ಮೆ ಕಣ್ಣಿಟ್ಟು ನೋಡಿ ನಸು ಯೋಚನೆ
ಗೊಳಗಾದೊಡಂ ಸಂತ್ವರಿತ ಮಾನಸಮಿನಿತುಂ
ವಿಪನ್ನಗೊಳದೆ ಸಂತಸ ಸಂತೃಪ್ತಿಗಳಿಂದೆ
ಅಂಗೀಕರಿಪ ಆಸೆಯುಂ ಭವಿಸಿ ತಾನಂದು
ಧನ್ಯನಪ್ಪಂತೆ ಎಳೆಯ ಸುಂದರ ಕಂದನಂ
ಎರಡು ಕೈಗಳಿಂದೆತ್ತಿ ತನ್ನಡಿಯಲಿಡುತುಂ
"ತಥಾಸ್ತು! ಸಮ್ಮತಮಿದೆಮಗೆ, ನೀವಿರ್ವರುಂ
ಸೊಗದಿಂದಿರಿ ಸಗ್ಗಂಬೊಕ್ಕು!" ಎಂದುಂ ಪರಕೆ
ಗೈದವರಂ ಬೀಳ್ಕೊಟ್ಟು ಮುನಿವರಂ ಕಂದಂಗೆ
'ಪ್ರಮದ್ವರಾ' ಎಂದು ನಾಮಕರಣಂಗೈದು
ಏಗಳುಂ ಸಂಪೋಷಿಸಲ್ಕೆ ಕೆಲ ವಟುಗಳಂ
ನೇಮಿಸಿ ಶಿಶುವ ತನ್ನೊಡಲ ಕುಡಿಯೊಲ್ ಸಾಕಿ
ಸಲಹಿದಂ. ಪ್ರಮದ್ವರೆಯು ಬಾಲಚಂದ್ರನೊಲ್
ಬೆಳಗಿ ಬೆಳೆಯುತ ಪರಾಶ್ರಮದ ಸುಶೀಲೆಯರ್-
ನಲ್ ಮಕ್ಕಳ್ ಮುಂತಪ್ಪ ಪರಿಚಯಮಿರ್ದೆಲ್ಲ

→

ಜನರೊಡಂ ಕಲೆತು ನಲವಿಂ ಬದುಕಿ ಸಂಸ್ಕೃತಿ
ಮೂಸೆಯೊಳ್‌ಕರಂಗಿ ಪುಟವಿಟ್ಟ ವಿಸುನಿಯೊಲ್
ಬೆಳಗಿದಳ್ ಆಶ್ರಮದ ಕಣ್ಣಾಗಿ. ದಿನದಿನಂ
ಮೈದುಂಬಿ ನವತಾರುಣ್ಯದಿಂ ಶೋಭಿಸಿ ಮೆರೆದಿರೆ
ಪರಿಸರದಲಿ, ಕಸ್ತೂರಿ ಪರಿಮಳಂ ಪಸರಿಸುವ
ತೆರದಿ ಪಸರಿಸಿತ್ತೈ ಪ್ರೌಢಿಮಾ ಕೀರುತಿಯು
ತನಗೆಣೆಮಣಿವಿಲ್ಲವೊ ಎನಲ್ಕೆ. ಇಂತಿರೆಯಿರೆ–
ಆವ ಕಾರ್ಯಾರ್ಥವೋ ಚ್ಯವನರ ಮೊಮ್ಮಗ–
ರುರು ಅಲ್ಲಿಗೈತಂದಂ. ಸುಂದರ ನವಯುವಕಂ
ಸಕಲ ವೇದಾಂಗ ಪಾರಂಗತನುಂ ರಾಜಕಾ–
ಕರಣ ಕುಶಲಿಯುಂ ಆಗಿರ್ದಂ. ಸ್ಥೂಲಕೇಶಮುನಿ–
ವರ್ಯನಾಶ್ರಮದೊಳಿರದಿರೆ ಪ್ರಮದ್ವರೆಯು
ತಾನೆ ಅತಿಥಿಗೆ ಪಾಲು ಪಣ್ಣುಗಳನಿತ್ತು ನಲವಿಂ
ಉಪಚರಿಸಲ್ ರುರು ಅತ್ಯಂತ ಸಂತುಷ್ಟತೆಯಿಂ
ಮೆಚ್ಚಿದನಾರಮಣಿಯುಂ ವಯೋಧರ್ಮದಿಂದಲಿ.
ರುರು–ಪ್ರಮದ್ವರೆಯರ ಸಮಾಗಮು ವಿಧಿನಿಯಮದಿಂ
ಲಭಿಸಲ್ಕೆ, ಜನ್ಮಜನ್ಮಾಂತರಗಳಿಂ ಧರ್ಮ
ಕರ್ಮ ಬೆಂಬಲಿಸಿ ಬಂದವೊಲ್ ಹೃತ್ ಕಲಶದಿ
ಪ್ರೇಮಾಮೃತ ತುಂಬಿ ತುಳುಕಿ ಕೋಡಿವರಿದು
ಈರ್ವರುಂ ಕೂಡಿ ಮಾತಾಡಿ ಒಲಿದು ಪರಸ್ಪರ
ಮೆಚ್ಚಿಯುಂ ನೆಚ್ಚಿಯುಂ ಹಾತೊರೆದರ್ ಮನದೊಳ್
ನಿಜದಂಪತಿಗಳಾಗೆ. ಮುನಿಪ ಸ್ಥೂಲಕೇಶಂ
ಕೆಮ್ಮನದನರಿತು ರುರು ಪಿತಂ–ನೃಪ ಪ್ರತತಿಯು
ಬಳಿಗೆ ಶಿಷ್ಯರನಟ್ಟಿ ಸುದ್ದಿಯುಂ ಕಳುಪಿ ತಾಂ

→

ಮುಂದಿನ ವಿದ್ಯಮಾನವಂ ಪ್ರತೀಕ್ಷಿಸು
ತಿರಲ್ ; ನೃಪಂ ಚಣಂ ತಳ್ವದಯು ಸತಿಸಹಿತ
ಆಶ್ರಮಕೆ ಆಗಮಿಸಿ ಮಹರ್ಷಿಯ ಭೇಟಿಗೈದು
ಕುವರನ ವಿವಾಹವಂ ನಿಶ್ಚಯಿಸಿ ಮೂದಿನಂ
ಆಶ್ರಮದೊಳಿರ್ದು ಪರಿಸರದ ವನವಾರ್ಧಿಯಲಿ
ಮುಳುಗಾಡಿ ಸೃಷ್ಟಿವೈಭವಕೆ ಮಾರುವೋಗಿ
ಸೌಂದರ್ಯ ರಸವೀಂಟಿ ; ಆನಂದದಿಂ ಉರ್ಬಿ
ಪಿಂತಿರುಗಿದರ್ ಪುರಕೆ. ಮತ್ತಮಾ ಬಂಧುಜನ
ಮುನಿಜನ ಮೊದಲಪ್ಪ ಸುಜನರೆಲ್ಲರ್ಗೆ ಬಲ್ಮೆಯ
ಆಹ್ವಾನಮಂ ಕಳಿಪಿ ತಾಂ ಸಡಗರದಿಂ ಪುರವಂ
ಸಿಂಗರಿಪ ಕಜ್ಜದೊಳ್ ಮನವಿಟ್ಟು ನ್ಯೈಮರೆತನಾ
ನೃಪ ಪ್ರತತಿ.

ದಿನಗಳುರುಳ್ದು ಶುಭವಿವಾಹದ
ಸಮಯ ಬಳಿಸಾರಿ ಬರೆ, ಸಡಗರ ಸಂತುಷ್ಟಿ
ಮೇಣ್ ಸಂಭ್ರಮಗಳ್ ಮೇರೆಯುಂ ಮೀರ್ದುದೆನೆ
ಕೋಡಿವರಿದುವು ಪುರದಲಿ. ಎಲ್ಲೆಡೆಯುಂ ತಳಿರು
ತೋರಣವಾಲೆ ನಳನಳಿಸುತಿರೆ ಅರಮನೆಯ
ದೀವಟಿಗೆಗಳ್ ಉಜ್ವಲಿಸಿ, ಸಕಲ ತರ ಮಂಗಳ
ವಾದ್ಯಗಳ್ ಮೊಳಗೆ, ಏಗಳುಂ ಭೂರಿ ಭೋಜನ
ಮುಂಡೊಡಲ್ ತೇಗೆ, ಸುಖಾನಂದಂ ತುಂಬಿ ತನು
ಮನಂ ಬಿರಿವಂತಿರ್ದುದೆಲ್ಲರ್ಗೆ. ಮತ್ತಮಾ
ದಿಬ್ಬಣ ಚೆಂದದಿಂ ಕಾನನದ ಪಥಮಂ ಪಿಡಿದು
ಬೈಗುಗಪ್ಪುಗವಿಯುವ ಮುನ್ನಮೆಯೆ ಸೇರಿದುದು
ಆಶ್ರಮಕೆ.

→

ಓಹೋ! ನೋಡಾ ಋಷ್ಯಾಶ್ರಮ ಪುಣ್ಯ
ಪರಿಸರದ ಘನ ನಿಬಿಡ ಕಾಂತಾರ ಸಂಪದಂ!
ಬೆಳ್ದಳಿರ್ ಪೊಂದಳಿರ್ ಪಚ್ಚದಳಿರ್ ಸಿಂಗರ
ಮೆಯ್ತುಂಬಿ ನಳನಳಿಸಿರೆ ಮುಮ್ಮಳೆಯಲಿ ಮಿಂದು!
ಪೇಳಲೇನಾ ಸೌಂದರ್ಯಂ? ಬಸಂತನುರ್ಕಿನ
ಒನಪು, ತೆಂಕಣದೆಲರ ತಣ್ಪು, ಪೊಸದಳಿರ
ಸೊಂಪು, ಪರಮೆಗಳ ಝೇಂಕೃತಿಯ ರಾಗದ ಪೆಂಪು.
ದಿನದಿನಂ ರವಿ ಚಂದ್ರರುದಯಾಸ್ತಮಾನಗಳ
ಮೋಹನೀಯ ವೈಖರಿ ಮೇಣ್ ತಾರಕಿತ ನಭ
ನೀಲಿಯಂ ಮುಟ್ಟುವವೊಲ್ ತೇಲುವ ನಿರ್ಭಾರ
ಪುಣ್ಯ ಪಯೋನಿಧಿಗಳ ಮಹಾ ಮೇಳ ನೆರೆದತ್ತು!

ಇಂತೊಂದು ನಿಸರ್ಗಸೌಂದರ್ಯ ಸಮ್ಮೇಳನಂ
ರುರು-ಪ್ರಮದ್ವರೆಯರ ಶುಭವಿವಾಹ ಪ್ರಯುಕ್ತ
ಪೊದಳ್ದುದೆನೆ ರಾರಾಜಿಸಿದತ್ತು, ವಸಂತನ
ವೈಭವಂ ಮಾರಿ! ಸಂಭ್ರಮಿತ ದಿಬ್ಬಣಕೆ ರಸ
ದೌತಣವ ನೀಡುವೊಲ್!

ದಿಬ್ಬಣಿಗರ್ ಮುದದಿಂ
ಮೋದದಿಂ ಬರುತಿರೆಯಿರೆ ಆಶ್ರಮದಂಗಣಕೆ
ಮುನಿಮಟುಗಳ್ ಪೆಂಗಳೆಯರ್ ಎಳೆಯ ಚಿಣ್ಣೆಯರ್
ಮಕ್ಕಳ್ ಸಡಗರ ಸಂಭ್ರಮಗಳಿಂದೆದುರುಗೊಂಡು
ಉಪಚರಿಸುತಿರಲ್, ಪ್ರಮದ್ವರೆಯಿತ್ತ ಆನಂದ
ಪೂತ ಹೃದಯದಿಂ ಮನೋವಲ್ಲಭಂಗೆ ಸ್ವತಃ
ಹೂಹಾರ ವಿರಚಿಸಿ ಸಮರ್ಪಿಸುವೆನೆಂದೆಂದು



ಉತ್ಸುಕತೆಯಿಂ ಮೊಲ್ಲೆಯ ಮೊಗ್ಗಂ ಬಿಡಿಸುತಿರೆ,
ಗಿಡದಡಿಯಲಿ ಸುಳಿಸುತ್ತಿ ಮಲಗಿರ್ದ ಪಾಂಬಂ
ಕಾಣದೆ ತುಳಿದು ಘೋರ ದಂಷ್ಟ್ರನಕೆ ಸಿಲ್ಕಿ
ಹಾಯೆಂದುರುಳಿ ಬಿಳ್ದು ಬಾಯೊಳ್ ನೊರೆಗಾರುತ
ಪೊರಳಾಡುತಿರೆ, ಘೋರ ಸುದ್ದಿ ಕಾಳ್ಕಿಚ್ಚಿನೊಲ್
ಪರ್ವೆ ಮುನಿಋಷಿಗಳ್ ಪಂಡಿತರ್ ಮತ್ತಮಾ
ನೃಪ ಪ್ರತತಿ ಮುಂತಪ್ಪ ಎಲ್ಲರ್ ಭಯ ಭೀತಿ
ಕಾತರಗಳಿಂ ತಲ್ಲಣಿಸಿ, ಧಾವಿಸುತ್ಯೆತಂದು
ಪಸುರ್ಮದ್ದಂ ಉಣಿಸಿ ನಲ್ ಉಪಚರಿಸಿದೊಡಂ
ಆವೊಂದು ಮದ್ದು ನ್ಯೆಗೂಡದೆ ಮರಣಿಸಿದಳ್
ಪ್ರಮದ್ವರೆ ಘೋರ ವಿಷರಸಮಂ ನ್ಯೆಗೊಂಡು.
ಎಲ್ಲರಂ ತಾಂ ಶೋಕಸಾಗರದಲಿ ಮುಳುಗಿಸಿ !

ಆಗಳೇನೆಂಬೆನವರ ಗೋಳಂ ? ರುರುವಿಂಗೆ
ಗಗನ ತಲೆಯ ಮೇಲೆ ಕಳಚಿ ಬಿಳ್ದವೊಲಾಗೆ
ಎರ್ದೆ ಬಿರಿವಂತಳ್ದು ಗೋಳಾಡಿ ಬಲು ಬಳಲಿ
ಬಿದ್ದು ಮೂರ್ಛಿತನಪ್ಪಿ ಎಲ್ಲಗೇ ಮತ್ತೊಂದು
ಸಂಕಟಕೆ ತಾಂ ಕಾರಣನಾದಂ! ಮತಾತ್ಮಗಳ್
ಪಂಡಿತರ್ ಕೂಡಿ ಶ್ಯೆತ್ಯೋಪಚಾರಂಗ್ಯೆದು
ಮುಚ್ಚೆಯಿಂ ಎಚ್ಚರಿಸೆ ಕಂಗಳಂ ಬಿಟ್ಟು ಬಿರಿ
ಬಿರಿ ನೋಡಿ ತಳ್ಕನೆದ್ದು ದುಃಖ ಸಂಕಟಗಳಿಂ
ತನು ಸಿಡಿದೊಡೆಯುವಂತಿರೆ ಮನದೆ ಶಿವನದೊಂದೆ
ಧ್ಯಾನದಿಂ ಉಸಿರಿಡಿದು ನ್ಯೆದುಂಬಿ ಓಡೋಡಿ
ನದೀತೀರಕ್ಯೆದು ಅತಿ ದುಃಖಸಂಕಟಗಳಿಂ
ಈಶ್ವರನಂ ಪರಿಪರಿಯಲಿ ಪ್ರಾರ್ಥಿಸುತಿರಲ್
ಆರ್ತನೊರೆ ಅಭವನಂ ಮುಟ್ಟಲಾಗಳಿಗೆಯೊಳ್, 

ಮನಂಮರುಗಿ ಧರೆಗಿಳಿತಂದನಾ ಗಳಿಗೆಯಲಿ.
ಕಡುದುಃಖಿ ರುರುವಿನ ಶಿರದೊಳ್ ವರಹಸ್ತಮಂ
ಬಲ್ಮೆಯಿಂದಿಕ್ಕಿ ನುಡಿದಂ "ಎಲೈ ಕಂದ, ರುರು,
ನೀನಿಂತು ಕಂಗೆಟ್ಟು ಮತಿಗೆಟ್ಟು ತಳಮಳಿಸೆ
ಆವ ಭಾಗ್ಯಮಿಲ್ಲಂ. ಇಂದು ನಿನ್ನ ಪ್ರೇಯಸಿ
ಆಯುರ್ಮಗಿದು ಪಯೋಧರ್ಮದಿಂ ಮೃತಳಾಗೆ
ನೀನಳ್ತು ತಹತಹಿಸಿ ಏಂಗೈವೆ? ಇನ್ನವಳ
ಆಸೆಯಂ ತೊರೆದು ತಾಯ್ತಂದೆಯಂ ಸಂಸೇವಿಸಿ
ಸಂಜೀವನಂ ಸಾರ್ಥಕ್ಯದಿಂ ಮುಕ್ತಿಪಥವಿಡಿಯೈ !"
ಅಂತೆಂದ ಈಶ್ವರನ ನುಡಿಯನಾಲಿಸಿದೊಡಂ
ತನು ಸಿಡಿದೊಡೆಯುವಂತಿರೆ ಮನದೆ ಶಿವನದೊಂದೆ
ಧ್ಯಾನದಿಂ ಮಣಿದು ಕಾಲ್ವಿಡಿದು ಪ್ರಾಂಜಲಿಯೊಡ್ಡಿ
ಬೇಡಿಹಂ ಹೇ ಈಶ್ವರ! ಎನಗಿಂ ಜೀವನಂ
ಸಲ್ಲ, ಆನೀಕ್ಷಣಂ ಪ್ರಾಣಮಂ ನಿನ್ನಡಿಗೆ
ಒಗೆದು ನಿನ್ನ ಸೇವೆಗೆ ಸಲ್ವೆಂ ಮನ್ನಿಸು ದೇವ !"
"ಎಲೆ, ಮಗುವೆ! ಆಯುಸ್ಸು ತೀರಿದ ಬಳಿಕಂ ಆರ್
ಬದುರ್ಕುವರ್ ಪೇಳ್ ? ಇಂತಪ್ಪ ವ್ಯರ್ಥ ಸಾಸಂ
ಕೈಕೊಳ್ಳದಿರ್. ಸೈರಣೆವೇಳ್ಕುಂ ಮನುಜಂಗೆ".
"ಸ್ವಾಮಿಾ, ಶಿವನೇ! ಸಲಿಸು ನೀನೆನ್ನ ಅಭೀಷ್ಟಂ.
ಎನ್ನದುರುದುಂಬಿತನವ ಮನ್ನಿಸಿ ದಯೆದೋರು!"
ಎಲೆ, ಪ್ರತತಿ ಸುತ! ನಿನ್ನಾಸೆಯಂ ಸಲಿಸಲ್ಕೆ
ಬೇರೊಂದು ವಿಧಮಿರ್ಕುಂ. ನೀನೊಪ್ಪಿದೊಡಮೆಲ್ಲ
ಸೊಗಮಕ್ಕುಂ! ಏಂವೇಳ್ವೆಂ ?"
"ದೇವ ನಿನ್ನ ನುಡಿಗಾಂ
ಬದ್ಧಂ. ಕೃಪೆದೋರಿ ಪರಿಪಾಲಿಸೈ" ಎಂದಂ.



"ಕೇಳ್ ರುರು ! ನಿನ್ನರ್ಧಾಯುವಂ ದಾನಗೈದೊಡೆ
ಪ್ರಮದ್ವರೆ ಬರ್ದುಕುವಳ್" ಎನಲಾಭವಂ, ರುರು
ನೀರುಂ ಬೊಗಸೆಯೊಳೆತ್ತಿ ಧಾರಾಪೂರ್ವಕಂ
ತನ್ನರ್ಧಾಯುವಿತ್ತಾಗಳಿಗೆಯೊಳ್ ತೆಕ್ಕನೆಯೆ
ಪ್ರಮದ್ವರೆ ಪ್ರಾಣಂಬಡೆದೆಳ್ದ ಹರ್ಷೋದ್ಗಾರಂ
ಕೇಳಬರೆ ಕುಟಿಯೆಡೆಯಿಂ, ರುರು ಮನದಲಿ ಸಂತಸಂ
ಉಕ್ಕುವನಿತರೊಳೆ ಕುಸಿದು ಬಿಳ್ದು ಮರಣಿಸಿದಂ !
ಆಗಳೇಂವೇಳ್ವೆನೋ, ಸಕಲ ಪರಿವಾರದಾ
ದುಃಖದಾವೇಗಮಂ ? ಹಾ ! ಎನುತಿರೆ ಮುನಿಜನ
ಪ್ರತತಿಯು ಶವದ ಬಳಿಗೈತಂದು ಬೆಸನದಿಂ,

"ಮಗನೆ ! ಏಂಗೈದೆ ? ನೀನಿಂತು ಪೂರ್ಣಾಯುವಂ
ನೀಡುವರೆ ? ಇನ್ನಿರ್ಧಾಯುವೊಳರ್ಧ ಮಾತ್ರಂ
ನೀಡಿದೊಡೆ ಈರ್ವರುಂ ಬದುಕಲಕ್ಕುಮೆಂಬುದ
ಮನದೊಳ್ ಬಗೆದಿರ್ದೊಡೆ ಇಂತಪ್ಪ ಪ್ರಮಾದ
ಮಿರಲಿಲ್ಲೈ ಇದನೆಂತು ಸೈಪುದರಿಯೆನ್ ಕಂದ !"
ಎಂದಳುತ ಅಭವನಂ ಪ್ರಾರ್ಥಿಸುತಿರೆ ಕುಟಿಯಿಂ
ಓಡಿ ಬಂದ ಪ್ರಮದ್ವರೆ ಶಿವನ ಕಾಲ್ವಿಡಿದು "ದೇವ !
ಪತಿಯಿಲ್ಲದಾನು ಬರ್ದುಕಿ ಏಂ ಫಲಂ ? ತವ
ಪಾದಕ್ಕೆನ್ನಂ ಸಮರ್ಪಿಸುವುದಲ್ಲದೆ ಗತಿಯಿಲ್ಲ."
ಎನುತುರುಳ್ದಳು ಧರೆಗೆ.
ಆಗಳಾ ಈಶ್ವರಂ
ಈರ್ವರಿಂಗು ಪೂರ್ಣಾಯುವಂ ದಯಪಾಲಿಸಿ
"ನಿಮ್ಮ ದೃಢಭಾವಂ ಮೆಚ್ಚಿದೆಂ. ಇಂ ಸೊಗದಿಂ
ಬಾಳ್ಗೆ" ಎಂದು ಹರುಷದಿಂ ಪರಸಿ ಮೈಗರೆದಂ !

— c —

# ರುದ್ರಾಣಿ—ಇಂದ್ರಾಣಿ

(ಆಧಾರಿತ)

ಸಂಧ್ಯಾವಿಯತ್ತಳದೋಳ್ ಆರಕ್ತ ರಂಜಿತ
ಮಹಾ ಜೀಮೂತ ಮೇಳಂ ಮೆರೆಯೆ ಪೊನ್ನೇಸರ
ಕಳೆಯೋ ಎನಲ್ಕೆ ಕೆಂಗಮಾಗಿ ! ಮೆಲ್ಲಮೆಲ್ಲನೆ
ಪಶ್ಚಿಮ ತಟಿಯಲಿ ಮೈಗರೆದನಾ ಸ್ವರ್ಣಮುಖಿ
ಸಂಧ್ಯಾ ಶಿರೋಮಣಿ !
ಧರಾತಲದಿ ಮುಸ್ಸಂಜೆ
ಮುಸುಂಕುತಿರೆ ಸುಯ್ಗಾಳಿ ಸುಯ್ ಸುಯ್ಯನೆ ಸುಯ್ದು,
ದಿಶೆಯಿಂ ದಿಶೆಗೆ ಸುಳಿಸುಳಿದಾಡಿ ಎಲೆ ಎಲೆಗಳ
ಮರ್ಮರಿಸಿದಂ ರಾಸಲೀಲಾ ಲೋಲುಪ್ತಿಯಲಿ !
ನಗರಿಯಂಚಲದಿ ಪೂತಚೂತ ಎಲೆ ಗೊಂಚಲ
ಹೊದರಿನಲಿ ಹುದುಗಿ ಹಾಡುವ ಕೋಗಿಲೆಯ ಮೃದು
ಮಧುರ ದನಿ ಪೊಣ್ಮೆ ರಾಗಾನುರಾಗದಲಿ !
ಪಕ್ಷಿಕುಲಕಂಠರುತಿ ಶ್ರುತಿಯಂ ಮೀಂಟುವೊಲ್
ಮೊಳಗಿ ಪ್ರಶಾಂತ ಸಂಧ್ಯಾಕಾಲಮತಿಮಧುರಂ !

ದಿವಸಾವಸಾನದಿಂ ಜಗದ ಜಂಜಡಮಳಿಯೆ
ಮುಸುಗಪ್ಪು ಮುಸುಂಗಿ ನಿಶಾರಾಣಿ ಧರಿಸಿರ್ದ
ಕರ್ಪುಡಿಗೆ ನಕ್ಷತ್ರಖಚಿತಮಾದುದು ಜಗದೊಳ್

ಅಂದು, ಪೆತ್ತಮ್ಮೆಯೊಡಂ ಶಯನ ಮಂಚಮನೇರ್ದ
ಒಂಭತ್ತು ವರ್ಷ ತುಂಬದ ಬಾಲೆ ಇಂದ್ರಾಣಿ
ಸುಖನಿದ್ದೆಗೆತ್ತೊಡನೆ ನಿದ್ರಾಂಗನೆಯ ನಿಚ್ಚ
ಪರಮ ಸಖಿ ಸ್ವಪ್ನ ಸುಂದರಿ ಒಲಿದಳ್ ವಿಚಿತ್ರ
ವಿಭಾವರಿ ವೇಶದಲಿ !
ಬಾಲ್ಯದಿಂ ತನ್ನೊಡಂ
ಸ್ನೇಹ ಸೂತ್ರದಿಂ ತನುಮನ ಬೆಸೆದ ಆತ್ಮೀಯ →

ಗೆಳತಿ ರುದ್ರಾಣಿಯು ಕರವಿಡಿದು ನಡೆದಿರೆ ತಾಂ
ಪಥವರಿಯದ ಪಥದಲಿ ; ತೆಕ್ಕನೆಯೆ ಕೈಕೊಡವಿ
ರುದ್ರಾಣಿ ಮುನ್ನಡೆದಳೇಕೋ ವಿಚಿತ್ರತರ
ಭಯ ಭೀತಿಯು ಗಾವರ ಮನಂ ಕಾವಳಿಸಿದೊಲ್ !

"ಛೀ ! ಇದೇಂ ಗಾವರಂ ? ಏನಾಯ್ತು ಓಡಲ್ಕೆ
ರುದ್ರಾಣಿ" ಎಂದೊದರಿದಳ್ ಬಾಲೆ ಇಂದ್ರಾಣಿ
ಕನಸಿನ ಕನವರಿಕೆಯುಲಿ !

ಬಳಿಯೊಳ್ ಮಲಗಿದ್ದ
ತಾಯಿ ಎಚ್ಚತ್ತು ಮೈತಟ್ಟಿ "ಮಲಗು ಮಗಳೆ !
ನಿದ್ದೆಯೊಳ್ ಕನವರಿಸುತಿಹೆ" ಎನಲ್, ಇಂದ್ರಾಣಿ
ಕಣ್ಬಿಟ್ಟು ನೋಡಿ ಮಲಗಿದಳ್ ಘನ ನಿದ್ದೆಯಲಿ.
ನಿಶಾನಿಲ ಸುಯ್ದುಯ್ದು ಬೀಸಿ ವೀಸಿ ಚಾಮರ
ಸೇವೆಗೈಯೆ ಪ್ರಶಾಂತನಿಶಾಂತವಾಶಾಂತ
ನಿಶ್ಶಬ್ದ ನೀರವತೆ ಘನಿಸಿ ತೂಗಿ ಜೋಗುಳ
ಹಾಡಿದವೊಲ್ ಸುಖ ನಿದ್ರೆ ಶಯ್ಯಾವಾಸಿನಿಗೆ.

ಪ್ರಥಮ ಘಟ ಉರುಳ್ದು ಇಂದ್ರ ಮುಹೂರ್ತಮಡರೆ
ಮುಂಬೆಳಕು ಮೂಡಿತ್ತೈ ಮೂಡುವೆಟ್ಟನ ಮೇಲೆ.
ಪ್ರಾತಃಮಧುರ ಮನೋರಮಾ ಶಾಂತಸಮಯಂ
ಮುಂಬಕ್ಕಿಗಳನೇಳಿಸಿ ಕಲಕಂಠರುತಿಯೊಳ್
ಮೊಳಗಿಸಿತು ಸುಪ್ರಭಾತಮಂ ವರ ಶೈಲಿಯಲಿ
ಸ್ವರ್ಗಸುಧೆಯೇ ಧರೆಗಿಳಿತಂದು ಮೆರೆದವೊಲ್ !

ಇಂದ್ರಾಣಿ ನಿದ್ದೆಯಿಂದೆಳ್ದು ಪ್ರಾತಃವಿಧಿಯಂ
ಪೂರೈಸಿ ಶಾಲೆಗುಯ್ಯಲಣಿಯಾದೊಡಂ ಪ್ರಿಯ
ಗೆಳತಿ ಜೊತೆಗೂಡಲ್ ನೆರೆಮನೆಯಿಂದೈತರದಿರೆ
ಕಾಯುತಿರ್ದ ಇಂದ್ರಾಣಿಗೆ ಲಲಿತೆ "ಮಗಳೆ ನೀಂ →

ಪೊರಡು ! ರುದ್ರಾಣಿ ತೀವ್ರ ಜ್ವರದ ತಾಪದಿಂ
ಮಲಗಿರ್ದಳೆಂದಳಾಗಳ್ತಿ ತಾಯಿ ಶಾಂತಲೆ.
ನೀನಿನ್ನು ತಳ್ವದಿರ್, ಪೊಳ್ತು ಮೀರಿದೊಡೆ ನಿನ್ನ
ಶಿಕ್ಷಕಿ ಮುನಿದಪಳ್" ಎನೆ ಇಂದ್ರಾಣಿ ಶಾಲೆಗೆ
ತಾನೊರ್ವಳೆ ಪೊರವಂಟಳ್ ಮನಂ ಬಾಡಿದೊಲ್
ಪಡಿಮೊಗದಿಂ; ಸಾರ್ದುವಿಂತೆ ಮತ್ತೆರಡು ದಿನಂಗಳ್.
ರುದ್ರಾಣಿ ಸುಡುಜ್ವರದಿಂ ಬಿಡುಗಡೆಯಿಲ್ಲದೆ
ಮೈ ಕಾದು ಸೀದು ಸಿಡುಬುರೋಗದ ಗುಳ್ಳೆಗಳ್
ಬಂಡೆಳ್ದು ಮೈದುಂಬಿ ಪ್ರಾಣ ಕಂಟಕವಾಗೆ
ಎಳೆಮೈ ಕಟ್ಟುರದಿಂ ಸುಟ್ಟುರಿದು ಬಳಲಿದಳ್
ಕತ್ತರಿಸಿ ಕೆಡಗಿದೆಳೆಬಾಳೆ ಬಾಡಿದವೊಲ್ !

ಇಂದ್ರಾಣಿ ಪ್ರಾಣಗೆಳತಿಯಂ ನೋಡಲಾರದೆ
ನುಡಿಯಲಾರದೆ ಮನದೆ ನೊಂದು ಕಡು ನೋವುಂಡು
ಮನೆಮಾಡನೇರ್ದು ಇಣಿಕಿ ನಿಣುಕಿದೊಡಂ ಗೆಳತಿ
ಕಣ್ಗೆ ಕಂಡಳಿಲ್ಲಂ ; ಮೇಣ್ ಅವಳ ಸೊಲ್ಲುಂ
ಕೇಳ್ದುದಿಲ್ಲಂ ; ಕಂಡರೆನಿತೊ ಪಡಿಮೊಗದ ಪಿರಿ
ಮುಂದಿ ; ಗೆಲುವಿಲ್ಲ ; ಮಾತಿಲ್ಲ ; ಮೋನವೆ ಎಲ್ಲ !

ಆಗಳಲ್ಲಿಗೈತಂದ ಲಲಿತೆ ಮನಕದಡಿದ
ದನಿಯಿಂ ನುಡಿದಳ್ ಆನಾಗಳಲ್ಲಿಂದಲೇ
ಕರೆದು ಕೇಳಿದೆ ಶಾಂತಲೆಯಂ "ಮಗು, ರುದ್ರಾಣಿ
ಎಂತಿಹಳ್" ಎಂದು. ಬೇಸತ್ತ ಶಾಂತಲೆಯುದಕೆ
"ದಿನದಿನಂ ಸಿಡುಬುಗಳ್ ಮುಂಬೆಳೆದು ಕೀವ್ದುಂಬಿ
ಸೊರಗಿ ಸೊಗಡಪ್ಪಿಹಳ್" ಎಂದಳ್ ಕಂಬನಿದುಂಬಿ.

ತಾಯ ಮಾತಂ ಕೇಳ್ದು ಮನನೊಂದ ಇಂದ್ರಾಣಿ
ಖಿನ್ನಮೊಗದಿಂ ಪುಸ್ತಕಲೋಕದಿ ಮುಳುಗಿದಳ್.
ಘೋರಾತಿಘೋರಮಪ್ಪ ರೋಗಂ ತೀವ್ರತರ
ಅಂಟು ಜಾಡ್ಯಮಿರೆ ಪೋಗಿ ನೋಡುವವರಿಲ್ಲಂ.
ತಾಂ ಪೋಗುವೆನೆನೆ ಪಿರಿಯರಪ್ಪಣೆಯುಮಿಲ್ಲಂ.
ಈಯೊಂದು ಬೆಸನಂ ಮನಮಂ ನೆರೆ ಕೊರೆಯುತಿರೆ
ಜೀರ್ದುಂಬಿಯೊಲ್.

ಸಂದುವು ಕೆಲ ದಿನಮಿಂತೆಯೆ,
ಇಂದ್ರಾಣಿ ಶಾಲೆಯಿಂ ಪಿಮ್ಮರಳಿದ ಬಳಿಕಂ
ತಾಯಂ ಕುರಿತು "ಆನಿಂದು ದೂರದಿಂ ನೋಡಿ
ಬರಲೆ ?" ಎಂದು ಕೇಳಿಕೊಳೆ, ಲಲಿತೆ ಮನದಿ ನೊಂದು
ನೋಯುತ ಬಳಲಿದವೊಲ್ ಮೆಲುಸಿರಿನಲಿ ನುಡಿದಳ್,
"ಮಗಳೇ, ಸಿಡುಬು ರೋಗ ಅಂಟುಜಾಡ್ಯಂ ! ಎಳಿಯ
ಮಕ್ಕಳ್ಗೆ ಸೋಂಕು ತಗಲುವುದು ಮೊದಲಲ್ತೆ ? ಬಲ್
ಸೂಕ್ಷ್ಮಂ ಎಳೆಯರ ಮೈ. ಆಂ ದಿನದಿನಂ ಮನೆಯ
ಉಪ್ಪರಿಗೆಯೇರ್ದು ರುದ್ರಾಣಿ ಎಂತಿಹಳೆಂದು
ಶಾಂತಲೆಯೊಡಂ ಕೇಳುವೆಂ. ಕಠಿಣ ಪರಿಸ್ಥಿತಿ
ಇರುತಿರಲ್ ನೀನೆಂತು ಪೋಗುವೆಲೆ ಬಾಲೆ ? ವಿಧಿ
ಬಲ್‌ಕ್ರೂರಂ. ಏನಾದಪುದೊ ದೇವರೇ ಬಲ್ಲಂ !"
ತಾಯೊಡಲ ಸಂಕಟಂ ಗದ್ಗದಿಸೆ ಮಾತಿನೆಳೆ
ಜಗ್ಗುವೊಲ್ ಇಂದ್ರಾಣಿ ಅಚ್ಚರಿಯ ಮಾಳ್ಕೆಯಲಿ
ಕೇಳಿದಳ್ "ಅಮ್ಮ, ಪಿಂದೊರ್ಮೆ ಎನಗುಂ ಇಂತೆ
ಮೈಕಾದು ಗುಳ್ಳೆಗಳ್ ತುಂಬಿ ನರಳ್ದೆನಲ್ತೇ ?
ಆಗಳಿಂತಪ್ಪ ಅಡಚಣೆಯಿರದೆ ಬಂಧುಗಳ್
ಬರುತಿದ್ದರಲ್ತೇ ? ಈಗೇಂ ಸಲ್ಲದ ಅಡೆತಡೆ ?" →

ಎನಲ್ ಇಂದ್ರಾಣಿ ಆಚ್ಚರಿಯಿಂ ಮನಗೆಟ್ಟು
ಮತಿಗೆಟ್ಟವೊಲ್. ಅದರ್ಕಾ ತಾಯಿ ಬಲು ನೊಂದು
ದುಃಖಮನತಿದುಃಖಿತಗೊಳಿಪವೋಲ್ ಗದ್ಗದಿಸುತ
ನುಡಿದಳ್ "ಮಗಳೆ, ಕೇಳಿ ಬಳಲದಿರ್, ಇಂತಿಂತು
ಬಂಡೆಳ್ದು ಬರ್ಪ ದುರದೃಷ್ಟಮಂ ತೊಡೆಯಲ್ಕೆ
ಆರಿಂದಾಗದು. ಮಾರಿರೋಗ ಬಲ್ ಘೋರಮಪ್ಪ
ಅಂಟುಜಾಡ್ಯಮಲ್ತೇ ? ಮೈಕಾದು ಸೀದು ಕೆಂಪು
ಗುಳ್ಳೆಗಳ್ ಎಳ್ಪು ಕೀವು ನೋವುಗಳಿಂ ಪ್ರಾಣ
ಹಿಂಡಿ ಹಿಪ್ಪೆಗೈವುದನೆಂತು ಸೈಪಳ್, ಅರಿಯೆ.
ನೀಂ ಪೋಗದಿರ್ ನೆರೆಮನೆಗೆ. ಮನೆವಾಡನೇದಾ಼ಂ
ಗೆಳತಿ ಶಾಂತಲೆಯುಂ ಕರೆದಿಂದು ತಿಳಿವೆ ಕ್ಷೇಮಂ.
ಸಂಕಟವಿದೆನಗುಂ; ಅಂದಿಂದಿಗುಂ ಬಂಧಿಸಿದೊಲ್
ಎನಿತು ನೇಹ ಎನಿತು ಸಮತೆ ಎನಿತು ಪ್ರೇಮ
ಇರ್ದುದೆರಡು ಕುಟುಂಬದೊಳ್ ? ಈಗಳಿಂತಪ್ಪ
ಸಂಕಟದಿಂ ನೆರಂಗೊಡುವಂತಿಲ್ಲವಾಯಿತೆ ?
ಇಂತೊಂದು ಕಡು ಸಂಕಟವೆನ್ನಂ ಪಿಂಡುತಿದೆ
ಕ್ಷಣ ಕ್ಷಣಂ. ಏಂಗೈಯಲಿ ಪೇಳ್ ? ಆನೆಂತು
ಸೈಪೆನೋ ಶಿವನೇ ಬಲ್ಲಂ. ಎಂದಳಳಲಿದಳಾ
ತಾಯಿ ಲಲಿತೆ. ಇಂದ್ರಾಣಿ ವಿಷಯಮರಿತೊಡದಂ
ಅರ್ಥೈಸಲಾರದೆ ಕೆಮ್ಮನಿರ್ದಳ್, ಚಿತ್ತಮಂ
ಆವ ಮಂಕುಮಾಯೆಯೊ ಕವಿದವೊಲ್ !

ಒಡನೊಡನೆ
ಲಲಿತೆ ಮಗಳಂ ಬರಸೆಳೆದಪ್ಪಿ ಮೊಗಮಂ ನಿಳುಪಿ-
ಮುದ್ದುಗೈಯುತ್ತೆ ನುಡಿದಳ್ ಮತ್ತೆ "ರುದ್ರಾಣಿ
ಒಂದೆರಡು ಮಾಸ ನಿನಗಿಂ ಕಿರಿಯಳ್. ನಿನ್ನ



ಪೆಸರೊಪ್ಪುವಂತಿರವೇಳ್ಕುವೆಂದಾಸೆಯಿಂ
ಪೆಸರಿಸಿದಳ್ ಶಾಂತಲೆ 'ರುದ್ರಾಣಿ' ಎಂದು ಬಲ್
ಮುದ್ದಿನಿಂ. ನೀವೀರ್ವರ್ ನೆರೆಹೊರೆಯ ಮಕ್ಕಳ್
ಎನಲೊಲ್ಲದೊಂದಾಗಿ ಬೆಳೆದುದು ವಿಶೇಷಂ.

ಈಗಳ್ ಭಗವಂತಂ ಇಂತೊಂದು ಕಷ್ಟಮಂ
ತಂದೊಡ್ಡಿ ಈರ್ವರಂ ದೂರೈಸಿದ ದುಕ್ಕಕೆಣೆ
ಇಲ್ಲವಾದೊಡಂ ಸೈಸವೇಳ್ಕುಂ. ದೈವೇಚ್ಛೆ
ಏನಿರ್ಪುದೊ ಅರಿವುದೆಂತು ? ಇನ್ನುಮಿನ್ನುಳಿದುದು
ದೈವಮಂ ಬೇಡುವುದಲ್ಲದೆ ಬೇರಿಲ್ಲಂ. ಅವನೆ
ಕರುಣೆದೋರಿ ರೋಗ ನಿವಾರಿಸಿದೊಡೆ ಒಳ್ಳಿತು.
ನೀಂ ಏಗಳುಂ ಗೆಳತಿಗೊಳ್ಳಿತಕ್ಕೆ ಎನುತುಂ
ಬೇಡುತಿರ್. ದೀನವೊರೆ ಅಭವನಂ ಮುಟ್ಟಿದೊಡೆ
ಲೇಸಲ್ತೆ ? ಆನೇಗಳುಂ ಕೈಮುಗಿದು ಬೇಡಿ
ಪರಕೆಗೈವೆ." ಎನಲಾ ಲಲಿತೆ ಗದ್ಗದ ದನಿಯಿಂ.

ತಾಯ ಮಾತಂ ಮನವಿಟ್ಟು ಕೇಳ್ದ ಇಂದ್ರಾಣಿ
ಕಣ್ ಮುಗಿದು ಪರಕೆವೊತ್ತಳ್ ಮನದೆ.

ಮತ್ತೆ ಸಂದುವು ಕೆಲದಿನಂ ಎಂದಿನಂತೆವೊಲ್–
ರುದ್ರಾಣಿ ಉಗ್ರ ರೋಗ ಬಾಧೆಯ ಗೋಳಿನಲಿ
ಬಸವಳಿದು ಜೀವಶ್ಯವವಾದಳ್. ಗೆಳತಿಯಂ
ಕಂಡು ಬರಲ್ ಪಂಬಲಿಸಿದೊಡಂ ಇಂದ್ರಾಣಿ
ಪಿರಿಯರನುಮತಿ ದೊರೆಯದೆ ಮಿಣ್ಣನೆ ಮನೆಮಾಡ–
ನೇರ್ದು ನಿಣುಕಿ ನಿಣುಕಿ ನೆರೆಮನೆಯಂನಿಟ್ಟಿಸಲ್
ಆರೊಬ್ಬರುಂ ಕಂಡುದಿಲ್ಲದೆ ಮನಗರಗಿದಳ್.

ಇಂದ್ರಾಣಿ ನಿಟ್ಟುಸಿರ್ವಿಟ್ಟು ನೊಂದು ನೋಯುತಲಿ
ಪಾಳದಿ ಮನವಿಡೆ ಎಲ್ಲಿಯ ವಿದ್ಯೆ–ಸಂಸ್ಫೂರ್ತಿ ? →

ಮರುದಿನಂ ಇಂದ್ರಾಣಿ ಶಾಲೆಯಿಂ ಪಿಂಮರಳೆ
ನೆರೆಮನೆಯಲಿ ಎನಿತೊಂದು ಜನಸಂದಣಿ ಮೇಣ್
ವಾದ್ಯಮೇಳ. ಏನಿದರರ್ಥ ? ಆವ ಕಾರಣಮಿರ್ಕು ?
ರುದ್ರಾಣಿಗೆ ಮದುವೆ ? ಎಂತಪ್ಪ ಆಶ್ಚರ್ಯಂ ?

ಇಂದ್ರಾಣಿ ಓಡುತ್ತೋಡಿ ಭವನ ವಲಭಿಯೇರಿ
ನಿಣುಕಿದೊಡೆ ಕಂಡರ್ ಬಹುಮಂದಿ ಪೂಮಾಲೆ ಸಹಿತ.
ಓ ! ರುದ್ರಾಣಿಯ ಮದುವೆ ದಿಟಮಿರ್ಕುಂ ! ಕೇಳ್ವೆನೆನೆ
ತಾಯಿ ಮನೆಯೊಳಿಲ್ಲಂ ! ಪೋಗಿ ನೋಳ್ಪೆನೆಂದೊಡೆ
ತನಗಪ್ಪಣೆಯಿಲ್ಲಂ. ಏಂಗೈವುದೆಂದು ಯೋಚನೆ–
ಗೊಳಗಾಗೆ ಬಂದಳಲ್ಲಿಗೆ ತಾಯಿ ಸದ್ದಿಲ್ಲದೆ.

"ಏಕಮ್ಮಾ ನೆರೆಮನೆಯಲಿ ಮೊಳಗುತಿಹುದು ವಾದ್ಯ ?
ರುದ್ರಾಣಿಗೆ ಮದುವೆಯೆ ?" ಎಂದಳ್ ಆಶ್ಚರ್ಯವಿಸ್ಫಾರಿತ
ನಯನನಕ್ಷತ್ರಾವಲೋಕನಂ ಕೀಲಿಸದೆ.

"ಏಂಪೇಳ್ವೆಂ ಮಗುವೆ !" ಎನುತೆನುತ ಬಲುದುಃಖದಿಂ
ತಾಳಲಾಗದ ಒಡಲ ಸಂಕಟದಿಂ ಬಳಲ್ದು
ನಿಂತಲ್ಲೆ ಕುಸಿದವೊಲ್ ತಾರಾಡಿ ಪೇಳಿದಳ್,

"ನಿನ್ನ ಪ್ರಾಣಗೆಳತಿಯ ಪರಿಪಾಡು ಇಂದಿಗಾಯ್ತು.
ನರಳಿ ನರಳಿ ಬಳಲಿ ಹಿಡಿದಳ್ ತೀರದ ಹಾದಿ.
ಅಯ್ಯೋ, ಇನ್ನೆಲ್ಲಿಯ ನಿನ್ನ ಗೆಳತಿ ರುದ್ರಾಣಿ ?
ಆಡಾಡಿ ಬರುತಿದ್ದ ಅರಳು ಮೊಗ್ಗೆಯ ಕತ್ತು
ಹಿಸುಕಿದ ಪರಮಶಿವಂ ಇನ್ನೇನಿತ್ತಾಂ ನೊಂದ
ಪೆತ್ತೊಡಲಿಗೆ? ಕಷ್ಟಂ ! ಕಡುಕಷ್ಟಂ !" ಎಂದೆನಲ್
ಇಂದ್ರಾಣಿ ಏನುಮೇನೆಂದರಿಯಲಾರದಲಿ
ಮತ್ತೆ ಕಟ್ಟೆಚ್ಚರಿಗೆತ್ತು "ಅಂತೆಂದೊಡೇನ್
ತಿಳಿಯದಾದೆನಾಂ. ರುದ್ರಾಣಿಗೆ ಮದುವೆ ಸುಳ್ಳೆ ?" →

ಎಂವಳತಿ ಮುಗ್ಧದುಗ್ಧವಾಣಿಯಲಿ ಇಂದ್ರಾಣಿ.

"ಎಲ್ಲಿಯ ಮದುವೆ ? ಇನ್ನೂ ಒಂಭತ್ತು ವರ್ಷಗಳ್
ತುಂಬದ ಪಸುಳೆಯಲ್ತೆ ರುದ್ರಾಣಿ ? ಇಂತಪ್ಪ
ಬೇನೆಯನುಂಡು ಪ್ರಾಣಮಂ ಬಿಟ್ಟ ಮುದ್ದಿನ
ಕುವರಿಯಂ ಎಂತು ಬೀಳ್ಕೊಡುವಳೋ ಆ ತಾಯಿ !
ಮಗುವೆ ! ನೋಡಲಾರೆ, ನೋಯಲಾರೆ. ಭಗವಂತ
ಎಂತಪ್ಪ ನಿಷ್ಕರುಣಿ ? ಭವದಿ ಒಳ್ಳಿದರ್ಗಿಲ್ಲ
ಆಯಸ್ಸು. ಕ್ರೂರಿಗಳ್ ಕಡುಪಾಪಿಗಳ್ ಬದುಕಿ
ಬಾಳುವರ್ ನೂರ್ಕಾಲ ಭೂತಲಕೆ ಭಾರವಾಗಿ !

"ಅಮ್ಮಾ, ಅಂತೆನೆ ಇನ್ನು ಬಾರಳೇ ರುದ್ರಾಣಿ
ಶಾಲೆಗೆ ? ಮೇಣ್ ಆಟ ಪಾಠಕ್ಕೆ ? ನಿಜದಿಂ ಪೇಳ್ ?"

"ಇಲ್ಲ ಮಗಳೆ, ನಮ್ಮಯ ನಾಯಿ ಸತ್ತಂದು ಗುಳಿ
ತೋಡಿ ಮಣ್ಣಲಿ ಮುಚ್ಚಲಿಲ್ಲವೇ ? ಅಂತೆಯೇ
ರುದ್ರಾಣಿಯಂ ಗುಳಿಯಲಿ ಮುಚ್ಚುವರು ! ಇಂ
ಮಾಡಲೇನು ಅಸುವಳಿದ ಬಳಿಕ ? ಪುಟ್ಟು-ಸಾವುಗಳ್
ನಮ್ಮ ಕೈಯೊಳಿಲ್ಲಂ. ನಾವೊಂದು ನೆನೆಸಿದೊಡೆ
ದೈವ ಬಗೆವುದಿನ್ನೊಂದು ! ಈ ಕ್ಷಣಿಕ ಬಾಳು
ಯಾವ ಗಳಿಗೆಯಲಿ ಹರಿವುದೊ ನಾವರಿಯೆವು ಕಣ !
ರುದ್ರಾಣಿ ಬದುಕಿದ್ದೊಡೆ ಬಾಳ್ತುಂಬಿ ಚಿನ್ನದ
ಪುತ್ಥಳಿ ಎನಿಸುತಿರ್ದಳ್, ಎನೆ ಮನಸೋತು ಎದೆ
ಕರಗಿ ದ್ರವಿಸುವುದು ಬಿಸಿಲಟ್ಟಿದ ಮಂಜಿನೊಲ್"

ಇಂದ್ರಾಣಿ ತಾಯಿಯ ಎದೆಯೊಳ್ ಮುಖ ಹುದುಗಿಟ್ಟು
ದುಃಖಭಾರದಿಂ ಪ್ರೇಮದ ಗಣಿಯಂ ನೆನೆನೆನೆದು
ಕೊನೆಯ ಕಾಣಿಕೆಯೆನೆ ಅಶ್ರುತರ್ಪಣವಿತ್ತಳ್.

—o—

## ಸೋದರೀ ನಿವೇದಿತಾ

(ಆಧಾರಿತ)

ಸನ್ ಸಾವಿರದೆಂಟನೂರ ಅರವತ್ತೇಳರಾ
ಅಕ್ಟೋಬರ್ ಇಪ್ಪತ್ತೆಂಟರ ಶುಭದಿನದಂದು
ಸಂಜನಿಸಿದಳ್ ಮಾರ್ಗರೆಟ್ ಎಲಿಜಬೆತ್ ನೋಬಲ್,
ಭಾರತದ ಪುಣ್ಯದೊಲ್ ಐರ್ಲೆಂಡ್ ಪ್ರಾಂತದಲಿ!
ಜನ್ಮತಃ ಉತ್ತಮೋತ್ತಮ ದೇಶಭಕ್ತ ವಿ–
ಭೂತಿಗಳ ವಂಶಾವನಿ! ವಿದ್ಯಾಬುದ್ಧಿಗಳ
ದುರಂಧರೆ! ಮೇಣ್ ಜ್ಞಾನವಿಜ್ಞಾನ ಚಂದ್ರಿಕೆ!
ತತ್ವಶಾಸ್ತ್ರ, ಸಮಾಜ ಶಾಸ್ತ್ರ, ಮನಃಶಾಸ್ತ್ರ,
ಶಿಕ್ಷಣ ಶಾಸ್ತ್ರ, ಮಂತಪ್ಪ ಶಾಸ್ತ್ರಾಧ್ಯಯನದಿಂ
ಘನ ಪಾಂಡಿತ್ಯವೇತ್ತ ಮಹಾನ್ ಮಹಿಳೆಯಾದೊಡಂ,
ಮನಃಚಿತ್ತಂಗಳ ತರ್ಕವಿತರ್ಕತೆ ನಿಲುಕದ,
ಯೋಚಿಸಿದೊಡಂ ಅರ್ಥೈಸಲಾಗದ ಅತೀವತಮ
ಅಶಾಂತಿ ಹೃತ್ ಸಾಮ್ರಾಜ್ಯಮಂ ಕಲಕಿರಲ್,
ಎನಿತು ಚಿಂತಿಸಿದೊಡಂ ಎನಿತು ಜಾನಿಸಿದೊಡಂ
ಮನಂಗೆಟ್ಟು ನರಳೆ, ಜ್ಞಾನ ಅಪೂರ್ಣ ವಿದ್ಯೆಯುಂ
ಅಪೂರ್ಣ, ಬದುಕು ಅಪೂರ್ಣ, ಎನಿಸಿ ಪೂರ್ಣತೆಗಾಗಿ
ಅರಸೀಅರಸಿ ಅಸಫಲತೆಯಿಂ ತಲ್ಲಣಿಸಿದುದು
ಎದೆಗಡಲಾಳದ ಅನನ್ಯ ಅನುಪಮ ಜೀವಾಳಿ!

ಓಮೋ, ಬಣ್ಣಿಸಲೇನದಂ? ನರಳಿ ಕೊರಗಿ ಕೊನೆಗೆ
ಮಕ್ಕಳೊಡನಾಟದಲಿ ಮನಃಶಾಂತಿಯಂ ಪಡೆದು
ತನ್ನ ಜೀವನವನುದ್ಧರಿಪ ಯೋಚನೆ ಮನದಲಿ
ಮಿಂಚಿ ಬರೆ ಉತ್ಸಾಹದಿಂ ತೆರೆದಳ್ ಶಾಲೆಯೊಂದಂ

→

ವಿಂಬಲ್ಡನ್ ನಗರದಲ್ಲಿ.   ಆದೊಡೇಂ ಎನಿತೆನಿತು
ಪ್ರಯತ್ನದಿಂ ಸಂಜಾನಿಸಿ ಸಂಭಾವಿಸಿ ವೈಚಾರಿಕ
ವೇದಿಕೆಯೊಳ್ ಅಂಡಲೆದೊಡಂ ಶಾಂತಿದೂರವೆ !
ಶ್ರೀವನಿತೆ ಜಗದಿ ವೈವಿಧ್ಯಮಯ ಜೀವನಗಳಂ
ಸೂಕ್ಷ್ಮಾತಿಸೂಕ್ಷ್ಮದಿಂ ಜಾಲಾಡಿ ಸೋಸಿದೊಲ್
ಸಮೀಕ್ಷಿಸೆ ಎಲ್ಲೆಲ್ಲಿಯುಂ ಬಾಲಿಶವಲ್ಲದೆ
ಬಲಿತ ಭವದೀಯ ಚೆಂಗುಡಿಯುಂ ಕಾಣದೆ ಮನಂ
ಗೋಳಿಟ್ಟುದುದು ಕೈಗೂಡದ ಮಹಾ ಶಾಂತಿಗಾಗಿ !

ಅಂತಪ್ಪ ಸಂದಿಗ್ಧ ಸಮಯದೊಳ್ ಅಮೆರಿಕ
ರಾಷ್ಟ್ರದಲಿ ಜೈತ್ರಯಾತ್ರೆ ಕೈಕೊಂಡು ನರೇನ್
ಜಯಬೇರಿ ಭಾರಿಸಿ ವಿವೇಕಾನಂದನೈಸಿ
ಇಂಗ್ಲೆಂಡಿಗೆ ಪದಾರ್ಪಣೆಗೈದು ಧರ್ಮಪ್ರಚಾರ
ಕೈಕೊಂಡ ಸುವಾರ್ತೆ ಕರ್ಣಾಕರ್ಣಿಯೈಸಿ ತನ್ನ
ಅಂತರಂಗವಂ ಮುಟ್ಟಿದೊಡಂ ಅಶಾಂತಿಯಿಂ
ಪರಿತಾಪಾಗ್ನಿಯೊಳ್ ಬೇಯುತಿರ್ದ ಮನಂ ಒರ್ಮೆಗೇ
ಒಲಿಯದಿರೆ, ಬಾರತ ವೇದಾಂತಿಯುಂ ಸಂಧಿಸೆ
ಪಿಂಜರಿದಳ್ ಆ ಷೋಡಶಕಳಾಪೂರ್ಣ ಷೋಡಶಿ.
ಸಂದುವೆನಿತೊ ದಿನಮಾನಂ,  ವಿವೇಕಾನಂದರ
ವೇದಾಂತ ಧರ್ಮಪ್ರಚಾರ ದಿನದಿನಂವೆರ್ಚೆ
ಕಿವಿಗಳಂ ಮೇಘ ಘರ್ಜನೆಯೊಲ್ ಅಪ್ಪಳಿಸೆ
ಸುಜ್ಞಾನ ಪಿಪಾಸೆ ಭುಗಿಲೆದ್ದು ಧಗಧಗಿಸಿತೈ
ಜೀವಾತ್ಮಗಳಂ ಸೆಳೆಯುವ ಸೂಜಿಗಲ್ಲಿನೋಲ್ !

ಸಮಯೋಚಿತ ಪ್ರಜ್ಞಾನದಿಂದಲ್ಲಿಗೈತಂದ
ಗೆಳತಿ ಮೋನಿ ನೋಬಲ್ಲಳಂ ಹಿಂದೂ ಗುರುವಿನ
ಧರ್ಮಪ್ರಚಾರ ಸಭೆಗೆ ಬಲವಂತದಿಂದೆಳೆದೊಯ್ದಳ್ !
ಬಗೆಗದಡಿರ್ದ ಮಾರ್ಗರೆಟ್ ಎಲಿಜಬೆತ್ ನೋಬಲ್ →

ನಿರಾಸೆ ನಿರ್ಲಕ್ಷ್ಯಗಳ ಪರಾಯತ್ತತೆಯೊಳೇ
ಮುಳುಂಗಿರೆ ಅಧಿಕಾಧಿಕ ಬೇವುರಸಮುಂಡೊಲ್.
ಸುದೂರದ, ವೇದಿಕೆಯಿಂ ವೇದಾಂತ ಕೇಸರಿಯ
ಕಂಠಸ್ವನ ಕಂಚು ಮಿಡಿದವೋಲ್ ಮೊಳಗಿಬರಲ್
ವರಧರ್ಮಸಾರ ಸೆಳೆದುದು ತಾನೇ ತಾನ್ನೈಸಿ!
ಆ ಮಹಾತ್ಮನ ಕಂಗಳ ಕಾಂತಿಯುತ್ಕ್ರಾಂತಿಗಿಡಿ
ನೋಬಲ್ಲಳ ಅಶಾಂತಿಗೆ ತನಿಯೆರೆದೊಲ್ ತಣಿಸೆ,
ಹಾ! ಎಂದೊರಲ್ಬುವು ಮನಃಪ್ರಾಣಗಳ್ ತಣ್ಪುಂಡು.

ಆಗಳ್ ಶ್ರೀ ಗುರುವಿನುಪದೇಶಕೆ ಕಾತರಿಸಿ
ಮನಃಚಿತ್ತ ಸೋಲ್ದೊಲ್ ಎಲ್ಲೆಲ್ಲಿ ಧರ್ಮಸಭೆ
ನಡೆದರಲ್ಲಲ್ಲಿಗೆ ನಡೆದಳ್ ತಾಯಂ ಪಿಂಬಾಲಿಪ
ಎಳಗರುವಿನಂತೆ, ಭಾವನಾವೇಶಿ ನೋಬಲ್!
ಯುಗಪುರುಷನ ಮಹಾನ್ ವ್ಯಕ್ತಿತ್ವದ ಮುಖೇನ
ಪೊಣ್ಮಿದ ಅನನ್ಯ ಹಿಂದೂ ಧರ್ಮಾಮೃತಸಾರ
ಮನಕೆ ಚೆಲ್ವಾಗಿ ಚೋದನೆಯಾಗಿ ಪ್ರಫುಲ್ಲಿತ
ವೇದಸಾರವಾಗಿ ಪರಮೋಚ್ಚ ಧರ್ಮವಾಗಿ
ತೋರಿಬರೆ ಐರಿಷ್ ಮಹಿಳೆ ವಿವೇಕಾನಂದರ
ಭೇಟಿ ಪಡೆದು ಮುಖಾಮುಖೀ ಚರ್ಚಿಸಿ ವಿಚಾರ
ವಿಹಾರಂಗೈದು, ಆತ್ಮ ಅಧ್ಯಾತ್ಮಗಳ ಸಾರ
ಸರ್ವಸ್ವಮಂ ಪೀರ್ವ ಆಕರದಿಂ ಮನದಣಿಯೆ
ಉಪದೇಶಮಂ ಪಡೆದು ತಾದಾತ್ಮ್ಯಭಾವದಿಂ
ಸ್ವೀಕರಿಸಿ ಸಮರ್ಪಣಭಾವದಿಂದೊಪ್ಪಿದಳ್
ಧರ್ಮಗುರುವಂ ಹೃತ್ ಭಾರವಿಳಿಸಿದ ತೆರಂ!
ಆ ಬಳಿಕವಳ ನಾಕ್ಷತ್ರಿಕ ನೇತ್ರಗಳ್ ಮಿಂಚಿ
ಹರ್ಷಾಶ್ರುಬಿಂದುಗಳ್ ತುಂಬಿ ತಳುಕಿದುವಲಾ
ನುಣ್ಗದಪುಗಳ್ ತೊಯ್ದು ವೇದಾಂತಿಕ ವರ್ಚಸ್ಸು



ಮಾರ್ಪೊಳೆವ ಮಾಳ್ಕೆಯಲಿ ! ದಿನದಿನಂ ವೇದಾಂತ
ಪಿಪಾಸೆ ಬೆಳೆಯುತ್ತಿರಲ್ ಸುದತಿಯ ಮನೋಗತಿ
ಸಾತ್ವಿಕತೆಯ ಚಕ್ರಕೆ ಸಿಲ್ಕಿ ಪಾಶ್ಚಿಮಾತ್ಯರ
ವಿಧಿ ವಿಧಾನಗಳ ಕೊಂಡಿಗಳ್ ಕಳಚಿ ಬಿಳ್ದುವು !
ಆಗಳೇನೆಂಬೆನೋ ಜ್ಞಾನಾನಿ ಸುಂದರಿಯ
ಉತ್ಕಟೇಚ್ಛೆಯ ನಿಚ್ಚ ಪೊಚ್ಚ ಆಕರತೆಯಂ ?
ಎಲ್ಲಮಿರ್ದುಂ ಏನಿಲ್ಲದ ತನ್ನ ಮನಃಮರು
ಭೂಮಿಗೆ ಅಮೂಲ್ಯ ಜ್ಞಾನರಸಚೇತನೆಗೈದ
'ಗುರು' ಭಾರತಕೆ ಪಿಮ್ಮ್ರಳಿ ತಿಂಗಳಾರೇಳು
ಸಂದೊಡಂ ತನ್ನತಾಂ ಸೈಪೊಂದು ಆಂತರಿಕ
ದೃಢಪ್ರಜ್ಞೆ ಬಲಿಯದೆ ಚಣ ಚಣಂ ಕಠಿಣಮಪ್ಪಿ
ಬದುಕು ದುರ್ಬರವಾಗಲಾ ತರಳೆ ತಾಯುಳಿದ
ಮೃಗಶಾಬಕದೊಲ್ ತಹತಹಿಸಿ ಅಲೆದಾಡುತ
ಕಳೆದುವೇಸೋ ದಿನಗಳ್. ಇನ್ನೆಲ್ಲಿ ಅಂತಪ್ಪ
ಗುರುವರೇಣ್ಯಂ ? ಎಂಬ ಪ್ರಶ್ನೆ ಪಗಲಿರುಳ್ ಎಣೆ
ಇಲ್ಲದೊಲ್ ಕಾಡೆ, ಸ್ವಾನುಭವ ಕಂದಿ ಕುಂದಿದೊಲ್
ಭಾಸಣಿಸಿ ಹೃದ್ದೇಶದ ಗಿಳಿ ಕಾತರಿಸಿತ್ತೈ
ಅಧ್ಯಾತ್ಮ ಜ್ಞಾನದಾ ಸೌಂದರ್ಯ ತೃಷೆಯಿಂ
ಧರ್ಮಗುರುವಂ ಮನದಿ ಎಡೆಬಿಡದೆ ಜಾನಿಪೊಲ್ !
ಅಂತಿಂತು ಕಳೆಯಿತ್ತೈ ವರ್ಷಮಾನವೊಂದು ಅ-
ಶಾಂತಿಯಲಿ ಕುದಿಕುದಿದು, ಬೇಸರದ ಬೆಂಕೆಯಲಿ
ಬೆಂದು ಅಸಹನೆ ಉಕ್ಕುತಿರೆ ಚಿಂತನಾವೇಶ
ಘನಿಸಿ ದೃಢೀಕರಿಸಿದ ಸುಮುಹೂರ್ತದ ಆಶಾ
ಪಾಶಗಳ ಕಡಿದು, ಸರ್ವಸ್ವಂ ತೊರೆದು ಪಿಡಿದಳ್
ಭಾರತದ ಹಾದಿ ! ಸಾವಿರದೆಂಟನೂರತೊಂಭ-
ತ್ತೇಳರಲಿ ಹಾರಲುಗಲಿತ ಹಕ್ಕಿಯ ಮರಿಯೊಲ್ ! →

ಸಮುದ್ರ ಮಹಾಯಾನವಂ ಮುಗಿಸಿ, ಭಾರತ
ಭೂಮಿಯಲಿ ಧರ್ಮಗುರುದೇವನಂ ಕಂಡೊಡನೆ
ದಿವ್ಯಪಾದದ್ವಯವಿಡಿದು ಹಿಂದೂ ಮತ ರೀತ್ಯ
ಭಕ್ತಿಯಿಂ ನಲ್ಮೆಯಿಂ ನಮಿಸಿದಳ್ ತಲೆಮಣಿದು !
ಅಸುರ ತ್ರಾಸಿತ ದಿವ್ಯಲಕ್ಷ್ಮಿ ಧರೆಗಿಳಿತಂದು
ಘೂರ್ಣ ಉದ್ಭ್ರಾಂತತೆಯಿಂ ಮಂಡಿಯೂರಿ ಮಣಿದೊಲ್ !

ಎಂತಪ್ಪ ಅತ್ಯಪೂರ್ವಮಪ್ಪ ಸಮಾಗಮಂ !
ಈರ್ವರುಂ ಎಳೆ ಮುಗುಳ್ ನಗೆ ಬಿರಿದು ನಿಂದಿರಲ್
ಜೋಡಿಸಿದ ಕೈಯಾಗಿ ! ಕ್ಷಣ ಕ್ಷಣಂ ಸರಿದೊಡಂ
ಬಿರಿದುದೇಂ ಬಾಯಿ ? ಪಾಡಿದುದೇಂ ಮಾನಸ ಮುರುಳಿ?
ಮನಃಪ್ರಾಣಗಳ ಮೂಕ ಮೌನ ಸುಷುಪ್ತಿಯಲಿ!
ಆಗಳ್ ನಯನ ಚತುಷ್ಟಯಗಳಲಿ ಮಿಂಚಿನೊಲ್
ಪೊಳೆದ ಆಂತರಂಗಿಕ ಸಂದೇಶವನೂಹಿಸ !

ಲೋಕವಂದಿತ ಧರ್ಮಗುರುವಿನ ಮನಂ ತುಂಬಿ,
ಚಿತ್ತವರಳಿ ಕಾರುಣ್ಯದ್ರವ್ಯ ಬಿಸಿಲಟ್ಟಿದ
ಮಂಜಿನೊಲ್ ದ್ರವೀಕರಿಸುತಿರಲ್ ಬಲ್ಮೆಯಿಂ,
ನೇಹದಿಂ ಸ್ವಾಗತಿಸಿದರ್ ತಮ್ಮ ಶಿಷ್ಯೆಯಂ !

ಶ್ರೀ ವಿವೇಕಾನಂದರಿಗೆ ಆ ಸ್ತ್ರೀ ಮೂರ್ತಿ
ಶಿಷ್ಯೆ ಮಾತ್ರ ತಾನಾದಪಳೆ ? ಹಾ, ಅಲ್ತಲ್ತು,
ಭಾರತ ಜನಜೀವನದ ಕರುಣಾಯಿತ ಸತ್ಯ
ಚಿತ್ತಾರಕೆ ಪೊಸಮುದ್ರೆಯೊತ್ತಿ ಪರಿಷ್ಕರಿಸದೆ
ಪುಷ್ಟೀಕರಣ ಅಸಾಧ್ಯವೆಂಬುದನರಿತು
ಆ ದಿಶೆಯೊಳ್ ಮಹೋನ್ನತ ಕರ್ಮಕುಶಲಿಗಳಾ
ಅಗತ್ಯವೆನಿತೆಂಬುದಂ ಶ್ರೀಗುರುವೇ ಬಲ್ಲರೈ !
ಅಪ್ರತಿಭೆ–ಅಜ್ಞಾನ–ಅಶ್ರದ್ಧೆ–ಅನರಕ್ಷತೆ-
ದಾರಿದ್ರ್ಯ ಮುಂತಪ್ಪ ಪೀಡನೆಗಳ ನಿರ್ಮೂಲನೆ →

ಸಾಮಾನ್ಯರಿಗಕ್ಕುಮೆ ? ಸುಜ್ಞಾನಮೆ ಸುಜ್ಞಾನಂ.

ಭಾರತದ ಪುಣ್ಯರಾಶಿಯೆ ಘನಿಸಿ ಬಂದವೊಲ್
ಪ್ರಜ್ಞಾನ ನಿಧಿ ಬಂಧು ಬಳಗಮಂ–ತಾಯ್ನಾಡಂ
ತೊರೆದು ದೀನಾತಿದೀನೆಯಾಗಿ ಗುರುದೇವನಂ
ಅರಸಿ ಬಂದ ಮಾನವೀಯತೆಯ ವರ ಪ್ರತೀಕ !
ಸದ್ಭಾವ ಗಂಗೋತ್ರಿಯಲಿ ಮುಳುಗಿ ಮಿಂದವೊಲ್
ಸತ್ಯಭಕ್ತಿಗಳ ಸೌಂದರ್ಯಮೆ ತಾನಾದವೊಲ್
ಅದ್ವಿತೀಯ ರುಕ್ಮರಾಗಾತಪದ ತಳೋದರಿ !
ಅಶಾಂತಿ ಅಗ್ನಿಜ್ವಾಲೆಗೆ ಸಿಲ್ಕಿ ಧಗಧಗಿಸಿ
ನೆಚ್ಚುಗೆಟ್ಟು ಶಾಂತಿ ಸೌರಭಮಂ ಬಯಸಿ ಕಡಲ್
ದಾಂಟದ ಅನನ್ಯ ಅನುರಾಗವತಿ **Noble** !
ಪುಣ್ಯಭೂಮಿ ಭಾರತದ ಗೌರವ ಕುವರಿಯೊಲ್
ಶ್ರೀ ವಿವೇಕಾನಂದರ ಮಾನಸ ಸುಪುತ್ರಿಯೊಲ್
'ಭಗಿನಿ ನಿವೇದಿತಾ' ಎಂಬ ಪುಣ್ಯನಾಮಧೇಯದಿಂ
ಗೌರವಾದರಗಳಂ ಪಡೆದು ನೆಲೆ ನಿಂದಳಾ
ಶ್ರೀರಾಮಕೃಷ್ಣಾಶ್ರಮದ ದೇವದಾರುವಿನ
ತಣ್ಣೆಳಲ ಶಾಂತಿ ಸುಖಧಾಮದಾಶ್ರಯದಲಿ !

ಸಾವಿರದೆಂಟನೂರ ಫೆಬ್ರವರಿ ಮಾಹೆ ಶ್ರೀ–
ರಾಮಕೃಷ್ಣ ಪರಮಹಂಸರ ಜನ್ಮದಿನೋತ್ಸವ
ಸಂಭವಿಸೆ, ಅದರೊಳ್ ಪರಮ ಭಕ್ತರೊಡಂ ತಾಂ
ಭಾಗವಹಿಪೊಂದು ನಿಷ್ಠೆಯಿಂದಲಿ ಆ ಶ್ವೇತೆ
ಕಾವಿಧರಿಸಿ ದಕ್ಷಿಣೇಶ್ವರ ದೇಗುಲಕ್ಕೈದಳ್ !
ಆದೊಡೇಂ ? ಪೂಜಾರಿಗಳ್ ಅಹಿಂದುವನಿತೆಗೆ
ಪ್ರವೇಶವೀಯೆ ಪಿಂಜರಿದರ್ ! ಹಗರಣ ಪಿರಿ
ದಾಯ್ತು ಬೇಡಿಕೆ–ಹೇಳಿಕೆಗಳಿಂದೆ ! ನೋಬೆಲಳು
ರೀತಿ ನೀತಿ ಬೋಧಿಸಿ ಚರ್ಚಿಸಿ ಕಂಠಶೋಷಣೆ



ನೋಣ್ ಜ್ಞಾನವರ್ಷಣೆಗಳಿಂದವರಂ ಒಲಿಸೆ,
ಅಜ್ಞಾನ ಅನೀತಿಗಳಂ ದಾಂಟಿ ತನ್ನೈತ್ತರಕ್ಕೊದವಿದ
ಅಗೌರವಂ ಲೆಕ್ಕಿಸಿದಳೆ ? ಮನದಿ ನೊಂದಳೆ ?
ಹಾ, ಸೋತು ಗೆಲ್ದು ಗೆಲ್ದು ಸೋತ ವಿಚಾರಶೀಲೆ !
ತಾನೆಂದುಮೆಂದಿಗೂ ಹಿಂದೂತ್ವವಂ ಒಪ್ಪಿ
ಅನನ್ಯ ಶ್ರದ್ಧಾ ಭಕ್ತಿಗಳಿಂ ಆಚರಿಸುವೆಂ !
ಎಂದು ದೃಢ ಕಂಠದಿಂ ಘೋಷಿಸಿ ಪ್ರವೇಶ
ಪಡೆದು ದೇವಾಲಯಂ ಬೊಕ್ಕ ಹಿಂದೂ ನಾರಿ,
**Margaret Elizabeth Noble !**
ಅನಂತರದೊಳ್ ಪರಮಹಂಸರ ಕೊಠಡಿಗೂ
ಪ್ರವೇಶ ಪಡೆದುದಲ್ಲದೆಯೆ, ಸತಿ ಶಾರದಾ
ಮಣಿದೇವಿ ಪತಿವರ್ಯನ ಜನ್ಮದಿನೋತ್ಸವಂ
ಗುರಿಗೊಂಡು ದೇಗುಲಕ್ಕೈತರೆ ಕಂಡಳಾ ಸತಿ
ಶಿರೋಮಣಿಯಂ ಭಾವೋತ್ಕಂಠೆ ನೋಬೆಲ್ !
ಆ ತಾಯಿ ಅಹಿಂದು ಅತಿಥಿಯಂ ಅಸಡ್ಡೆಯಿಂ
ದೂರೀಕರಿಸಿದಳೆ ? ಅಹಃ ! ಆಗಣ ಕಟ್ಟು
ನಿಟ್ಟಿನ ಘೋರ ದಿನಗಳಲಿ ಮತಾಂಧಕಾರವು
ಕವಿದು, ಚಿತ್ತಕಲ್ಪ ಕದಡಿ ಬಗ್ಗಡವಾಗಿ
ಲೋಕ ಚಿಂತನೆ ಮನಃಮಂಥನೆಗೆ ಸಿಲ್ಕಿದೊಲ್
ಮುಸುಗಿರೆ ದಟ್ಟ ಮಂಜುದೆರೆ, ಲಕ್ಷಿಸಿದಳೇನದ
ಮಹಾಪುಣ್ಯಾವನಿ ಶಾರದಾಮಣಿದೇವಿ ?
ನೋಬೆಲಳಂ ಒಲ್ಮೆಯಿಂ ಕರೆದು ಆದರಿಸಿ
ಒಂದೆ ಹರಿವಾಣದೊಳ್ ಅವಳೊಡಂ ಉಪಹಾರ
ಸ್ವೀಕರಿಸಿ ಅನನ್ಯ ಅನುಪಮ ಗೌರವ ತೋರೆ,
ನೋಬೆಲಳು ಆ ತಾಯಿಯ ಪ್ರೇಮ ವಾರಿಯಲಿ
ಮಿಂದು ಮಡಿಯುಟ್ಟು ಮೈಮನಂ ಪುಷ್ಟೀಕರಿಸಿದಳ್ !

ಭವಿಷ್ಯದ ಮಹಾಗರ್ಭದಲಿ ಪವಿತ್ರತಮ
ಸಿಂಧುವಿನಲಿ ತಾನೊಂದು ಬಿಂದುವಾಗಿ ಬೆರೆಯೆ
ಸಾಮಾನ್ಯ ಸಂಸ್ಕಾರ ಸಾಲ್ಗುಮೆ ಭವದಿಯಲಿ ?
ಮೃತ ಚಿತಾಗ್ನಿಯಲಿ ಬೆಂದು, ಪುಟವಿಟ್ಟು ಮಿಸುನಿ
ಮಾರ್ಪೊಳೆವೊಲ್ ಆತ್ಮದೀಪ್ತಿ ಉಜ್ವಲಿಸಿದುದು !

ಬಂಗಾಳಿಗಳ ದಿವ್ಯ ಸಂಸ್ಕೃತಿ ವಾರ್ಧಿಯಲಿ
ಮುಳುಗಾಡೆ ಬಂಗಾಲಿಯಂ ಕಲಿತ ನಿಷ್ಣಾತೆ.
ಒರ್ಮೆ, ವಿಶ್ವಕವಿ ಭಾರತರತ್ನ ರವೀಂದ್ರ
ನಾಥ ಟಾಗೋರರಂ ಸಂಧಿಸಿ ಅವರೊಡಗೂಡಿ
ವಿಚಾರ ವಿಹಾರಂಗೈದು ಮನೋದಧಿಗೆ ಶಾಂತಿ
ಸೇಚನೆ ಪಡೆದುದು ಮಾತ್ರಮೇಂ ? ಅವರಲಿರ್ದ
ಇಂಗ್ಲೀಷ್ ವ್ಯಾಮೋಹವಂ ಕಿಡಿಸಿ ತಂಮಗಳ
ಇಂಗ್ಲೀಷ್ ವಿದ್ಯಾಭ್ಯಾಸಕೆ ವಿದಾಯ ಕೊಡಿಸಿದ ಧೀಮಂತೆ !
ಮಹಾ ವೇದಾಂತ ಜ್ಞಾನಮಯೀ ಚಿರಧವಳೀ !

ಭಾರತೀಯರಂ ಅತಿ ನಿಕೃಷ್ಟ ಭಾವದಿಂ
ಕಾಣುತಿರ್ದ ಆಂಗ್ಲರ ಹೀನ ಮನೋಭಾವವಂ
ತುಚ್ಛೀಕರಿಸಿ, ಅವರ ಕಣ್ಮುಂತೆಯೇ ಸೋಂಕು
ರೋಗ ಪೀಡಿತರ ಸೇವೆಗೈದ ಮಹಾ ಮಹೀಯಸಿ !
ಸೇವೆ–ಸೇವೆಯೇ ಪ್ರಧಾನ ಗುಣ. ಸೇವೆಯೇ
ಪರಮೋಚ್ಚ ಧ್ಯೇಯವೆತ್ತ ಅಮೂಲ್ಯ ಗುಣಾವನಿ !

ಕಲಿಕತ್ತೆಯ ಕೊಳೆಗೇರಿಯಲಿ ಸ್ವಚ್ಛಕಾರ್ಯ
ಕೈಕೊಂಡು ತಾನೇ ಪೊರಕೆವಿಡಿದು ಕೊಳಚೆಯಂ
ಗುಡಿಸಿ ಝಾಡಿಸಿ ಸ್ವಚ್ಛತೆಯಂ ಕಲಿಸಿದ ಸರಳೆ!
ಆತ್ಮ ಅಧ್ಯಾತ್ಮ ರಂಗದಲಿ ಅಂಡಲೆದು ಗುರು
ದೇವನ ಕರುಣೆಯಿಂದೆ ಆತ್ಮ ಸಾಕ್ಷಾತ್ಕಾರ
ಪಡೆದು ಮಾನವ ಜೀವನವ ಮಾನವೀಯತೆಯಿಂ →

ಉದ್ಧರಿಸಿ ಭಾರತ ಮಣ್ಣ ಹುಡಿಯೊಳ್ ಮಣ್ಣಾಗಿ
ಬೆರೆತ ಸೋದರಿ ನಿವೇದಿತ ಧನ್ಯೆ ! ಪರಮಧನ್ಯೆ !!

ವಿವೇಕಾನಂದರಿಂಗೆ ಸ್ತ್ರೀವಿದ್ಯಾಭ್ಯಾಸದ
ಕಾಳಜಿ ಇರ್ದುದು ಅಪಾರ. ಭಾರತ ಸ್ತ್ರೀಸಂಕುಲ
ಅಜ್ಞಾನ-ಅವಜ್ಞೆ-ಮೌಢ್ಯ ಅಮಾಯಕತೆಗಳಿಂದೆ
ವ್ಯರ್ಥಸಾಧನೆಗೈದು ಕ್ರಿಮಿಕೀಟಗಳವೊಲ್
ಬೆಲೆಯಿಲ್ಲದೆ ಸಂದು ಸ್ವರ್ಗವೇರ್ವದಾರಣದೆಶೆ
ಏಗಳುಂ ಭೈರಿಗೆಯೊಲ್ ಕೊರೆಯುತಿರೆ ಮನಮಂ
ಚಿಂತೆ-ಸಂಕಟ-ಪರಿತಾಪಗಳ ಊಟೆಯಾದ
ಅಂತರಾತ್ಮ ಅರಸುತಿತ್ತಾದಿಶೆಯೊಳ್ ಪರಿಹಾರ
ಕೈಕೊಳ್ವ ಧೀಮಂತ ಮಹಿಳಾಮಣಿಯರಿಗಾಗಿ !
ಅಂತಪ್ಪ ಸಂಶೋಧನೆಯಿಂ ಪೊದಳ್ದ ಜ್ಞಾನಿಯೀ
ಧೀರ ಧೀಶಕ್ತಿಯೀ ಸನ್ಯಾಸಿನಿ ಮಹಾಶ್ವೇತೆ !
ಪ್ರತಿ ಭಾರತೀಯರಲಿ ದೇವತ್ವವಂ ಕಾಂಬ
ಮೇಣ್ ಮತಿ ಮೌಢ್ಯದೊಳ್ ಗುಣಾದರ್ಶಗಳಂ
ಅರಸುವ ತತ್ವಜ್ಞಾನಿ ಸಕಲ ಶಾಸ್ತ್ರಕೋವಿದೆ !

ಇಂತೀತೆರಂ ಮೈವೆತ್ತ ವಿವೇಕಾನಂದರ
ಮಾನಸ ಕುವರಿ, ಆತ್ಮಪ್ರದೀಪ ಪರಿಶೋಭಿತೆ
ತನ್ನ ಜೀವಮಾನಮಂ ಭಾರತದ ವಿಮೋಚನೆಗೆ
ಮೇಣ್ ಭಾರತೀಯರುದ್ಧಾರಕೆ ಧಾರೆಯೆರೆದು
ತದೇಕ ಚಿತ್ತದಿಂ ತದೇಕಭಾವದಿಂ ಶ್ರಮಿಸಿ,
ಆಳ್ವರಾ ನಿರ್ಲಕ್ಷ್ಯದಿಂ ಮೂಲೆ ಸೇರ್ದ
ಕಲಾವಿದರಂ ಪ್ರೋತ್ಸಾಹಿಸಿ ಮೇಣ್ ಧೀಮಂತ
ಅವನೀಂದ್ರ ಠಾಕೂರರೊಳ್ ಭಾರತೀಯ ಶೈಲಿ
ಸ್ಫುರಿಸೆ ಕಾರಣಿಯಾದ ಸೋದರಿ ನಿವೇದಿತಾ,
ಭಾರತೀಯರಿಗಾಗಿ ಶಾಲೆ ತೆರೆದು ಶಿಕ್ಷಣ



ಕಾಮನೆಯ್ಯೈಸಿರಿಯಿಂ ಶ್ರಮವನ್ನೇ ಶ್ರಮಿಸಿಯುಂ
ತನ್ನೆತ್ತರಕ್ಕೇರದಾ ಬುದ್ಧಿ ಹೀನರಿಂಗೆ
ಮರುಗಿ ಶಾಲೆಯುಂ ಮುಚ್ಚಿದೊಡಂ ಭಾರತೀ–
ಯತೆಯುಂ ತೊರೆಯದ ಪರಮ ಗುಣವತಿ !

ಭಗಿನಿ ನಿವೇದಿತಾ ಪಾರಜದೊಲ್ ಚಟುವಟಿಕೆಯ
ಬೀಡು. ರಾಮಕೃಷ್ಣಾಶ್ರಮದ ಅಧ್ಯಾತ್ಮಿಕ
ಮೇಣ್ ಪ್ರಶಾಂತ ವಾತಾವರಣ ತನ್ನೊಂದು
ಬಿರುಸಿನ ಬಿರುಗಾಳಿಯೊಲ್ ಮೂಡಿಬಹ ವಿಚಾರ
ಬೆಂಕೆಯಿಂ ಸಾಧನೆ ತಪಸ್ಸುಗಳ ಹಚ್ಚನೆ
ಹಸಿರು ಮಂಟಪ ಸುಟ್ಟುರಿದು ಹೋಹುದೆಂದರಿತು
ಮನಂ ಚಡಪಡಿಸುತಿರುವ ಸಮಯದಿ ಆತ್ಮಗುರು
ಸ್ವಾಮಿ ವಿವೇಕಾನಂದರ ಮರಣ ಧುತ್ತೆಂದು
ಹಠಾತ್ತನೆ ಒದವಿಬರಲ್ ಸಿಡಿಲ್ ಎರಗಿದೊಲ್ !
ಆ ದುಃಖ ಸಂಕಟಂ ಕಳೆದಬಳಿಕ ಶ್ರೀಮಠದ
ಸದಸ್ಯತ್ವಮಂ ವಿನಮ್ರತೆಯಿಂ ತೊರೆದು ಭಗಿನಿ
ನಿವಾಸದಿ ನೆಲೆನಿಂದು ರಾಷ್ಟ್ರೀಯ ಮುಖಂಡ
ರೊಡಂ ಮುಕ್ತ ಮನದಿಂ ದೇಶಹಿತ ಕಾರ್ಯಮಂ
ಕೈಕೊಂಡಳ್ ! ಮುಂಬೈ ಮಹಿಳೆಯರ ಸಂಘದಾ
ವೇದಿಕೆಯ ಮೇಲಿಂದ ಬಿತ್ತರಿಸಿದ ವಚನ
ಮಿಂತಿರ್ಪುದು ಕೇಳಾ ! "ಪಾಶ್ಚಾತ್ಯ ಆಧುನಿಕ
ಬೆಡಗು–ಬಿನ್ನಾಣ–ದುಂದುಗಾರಿಕೆ–ಆಂಗ್ಲ ಶಿಕ್ಷಣ
ಮುಂತಪ್ಪ ತಳುಕಿನಾಗರಂಗಳ್, ನಿಮ್ಮಯಾ
ಭಕ್ತಿಭರಿತ ಸೌಜನ್ಯ ಮೇಣ್ ಎಳೆ ಜನಾಂಗ
ಪಿರಿಯರ್ಗೆ ತೋರುತಿಹ ಕೃತಜ್ಞತಾಪೂರ್ವಕ
ಗೌರವಂಗಳಂ ಕಿಡಿಸದಿರಲಿ ! ತವ ಸ್ತುತ್ಯರ್ಹ
ರೀತಿನೀತಿಗಳ್ ಗಾಳಿಯೊಳ್ ತೂರಿ ಹೋಹದೊಲ್ →

ಸಂರಕ್ಷಿಸಿ !" ಹಾ ! ಇಂಥ ಮಹತ್ತರ ಹಿಂದುತ್ವ
ಆಪರಂಜಿಯನ್ನೆ ಅಪರಂಜಿಗೊಳಿಪ ಚಂದ್ರಿಕೆ !

ನಾಗಪುರದ ವಿದ್ಯಾರ್ಥಿಗಳಂ ಕುರಿತು "ಇಂದು,
ರಾಷ್ಟ್ರನಿರ್ಮಾಣಕೆ ಅಗತ್ಯಮಿರ್ಪುದು ದೇಶ
ಭಕ್ತಿ ಶಕ್ತಿಶಾಲಿಗಳ್ ಎಂಬುದನರಿತರಿತು
ನಿಂಮನಿಮ್ಮ ಸ್ವಶಕ್ತಿಯಂ ಬೆಳೆಸಿಕೊಳ್ಳಿರೈ !"
ಎಂದು ಉಪದೇಶಿಸಿದಳ್ ಪೆತ್ತಮ್ಮೆಯಂ ಮಿಗಿರ್ಪು.
ಇಂತಪ್ಪ ವಚನಂ ಅಸಂಖ್ಯಂ ! ಮೇಣ್ ಬರೋಡೆ
ಕ್ಷೇತ್ರದಲಿ ಸೇವೆ ಸಲ್ಲಿಸುತಿರ್ದ ಅರವಿಂದ
ಘೋಷರಿಗೆ ತಮ್ಮ ಸ್ವಕ್ಷೇತ್ರದೊಳೆ ಕಾರ್ಯಮಂ
ಕೈಕೊಳಲ್ ಬಿನ್ನವಿಸಿದಳ್ ಭಗಿನಿ ನಿವೇದಿತ.

ತಂಗಿಯ ವಿಚಾರಪೂರ್ಣ ಆಹ್ವಾನಕೆ
ಓಗೊಟ್ಟ ಅರವಿಂದರ್ ಬಂಗಾಳಕೆ ಮರಳಿ,
ಈರ್ವರುಂ ತಾಯಿ ಭಾರತಿಯ ಮೇಣ್ ಭವಾನಿಯ
ಅನನ್ಯ ಆರಾಧಕತೆಯಿಂದೆ ನಾನಾ ಕ್ಷೇತ್ರ
ಸಂವೇದನೆಯೊಳ್ ಕೆಚ್ಚಿನಿಂ ಮುಂಗೆತ್ತು ಭೂ
ತಾಯ ಮುಕ್ತಿಮಾರ್ಗದಲಿ ಭಾರತ ನಾಯಕರಿಗೆ
ಮಾರ್ಗದರ್ಶನ ಮಾಡಿಸಿದರ್ !

ಸ್ವದೇಶಿ ಚಳವಳಿ
ಮುಂಬೆಳೆಯೆ ನಿವೇದಿತ ಬ್ರಿಟಿಷರ ಮುಂಗೆತ್ತು,
ಜಡನಿದ್ರೆಯೊಳಿರ್ದ ಅನೇಕಾನೇಕ ದೇಶಿಗ
ಹುಂಬರಂ ಎಚ್ಚರಿಸೆ ಸ್ವದೇಶೀ ವಸ್ತುಗಳಂ
ಕೈಗಾಡಿಯೊಳ್ ತುಂಬಿ ಮನೆಮನೆಯ ಬಾಗಿಲಿಂಗೆ
ಒಯ್ದು ಮಾರಿ ಸ್ವದೇಶ ಪ್ರಿಯತೆ ಏನೆಂಬುದಂ
ಮುಮ್ಮಾತಿನೊಳ್ ತಿಳುಪಿ ಚಳವಳಿಗೆ ತನ್ನೊಂದು
ಅತ್ಯುತ್ತಮ ಸೇವೆಯಂ ಕಾಯಾ ವಾಚಾ ಮನಸಾ →

ಸಲ್ಲಿಸಿ ಭರತಭೂಮಿಯ ಋಣವಂ ಕಿಂಚಿತ್ತೂ
ಕೊರವಿಲ್ಲದೊಲ್ ಸಲ್ಲಿಸಿ ಕೃತಾರ್ಥಳಾದಳಾ
ಮಹಾನ್ ಮಹಿಳಾಮಣಿ ಸೋದರೀ ನಿವೇದಿತ !

ಸಹಸ್ರಾವಿರದೊಂಭೈನೂರ ಐದರಲಿ ಬದ್ಧ
ಜಿಜ್ಞಾಸೆ ಪುಟ್ಟಿ ರಾಷ್ಟ್ರೀಯ ಕಾಂಗ್ರೆಸ್ ಒಡೆದು
ಇಬ್ಭಾಗವಾಗೆ ಮನದಿ ಬಲು ನೊಂದ ಸೋದರಿ
ನಾಯಕದ್ವಯರಿಗೆ "ಉಗ್ರಗಾಮಿ-ಮಂದಗಾಮಿ
ಪಂಥಗಳ್ ತಂತಮ್ಮ ಮನೋವೃತ್ತಿಯನಿಂದು
ಒಗ್ಗೂಡಿಸಿ ರಾಷ್ಟ್ರೀಯತೆಯ ಭದ್ರ ಬುನಾದಿ
ನಿರ್ಮಿಪ ಹೊಸ ವಿಚಾರ ಧಾರೆಯಲಿ ತರಬೇತಿ
ನೀಡಿ ರಾಷ್ಟ್ರೀಯರಂ ದಟ್ಟ ಪುಷ್ಟತೆಯಿಂದೆ
ಮುನ್ನಡೆಸಿ ! ಹಿಮಾಲಯದಿಂ ಕನ್ಯಾಕುಮಾರಿಯ
ವರೆಗೆ, ಮಣಿಪುರದಿಂ ಪರ್ಷಿಯಾ ಕೊಲ್ಲಿಯವರೆಗೆ
ವಿಶಾಲ ಪವಿತ್ರ ಭೂಮಿಯಲಿ ಜೀವಿಸುತಿರ್ಪ
ಕುಟುಂಬಗಳ ಸರ್ವಸದಸ್ಯರ ಹೃದಯಗಳಂ
ಮಿಡಿಸಿ, ನಾಡಿ ನಾಡಿಗಳಲಿ ಸ್ವದೇಶೀ ಭಾವನೆ
ಬಲಿಯುವಂತ ಕಾರ್ಯಕುಶಲಿಗಳಂ ತಯಾರಿಸಿ !"
ಎಂಬೊಂದು ಉಲ್ಲೇಖನವ ಲೇಖಿಸಿ ಕಾಂಗ್ರೆಸ್
ಅಧಿವೇಶನಕೆ ಕಳುಹಿಸಿದಳಾ ಪರಮಯೋಗಿನಿ !

ಸಾವಿರದೊಂಭೈನೂರ ಎರಡರಲಿ ಕಲಿಕತ್ತಾ
ನಗರದಲಿ ಡಾನ್ ಸೊಸೈಟಿ ಸಂಜನಿಸಿ ಯುವ
ಬಂಗಾಳಿಗಳಲಿ ದೇಶಭಕ್ತಿಯನು ಚೋದಿಸಿ
ಬೇರೂರಿಸುವ ಕಾರ್ಯಕ್ರಮವಂ ರೂಪಿಸಿದರ್,
ಅದರ ಮುಂಭಾರವೊತ್ತು ಸಂಚಾಲಕಿಯೈದು
ಬಹುಮುಖದ ಶಾಖೋಪಶಾಖೆಗಳ್ ಅತ್ತಿತ್ತ
ನೈಕೈ ಚಾಚಿರೆ ಎಲ್ಲೆಡೆಯುಂ ತಾಂ ದುಂಬಿಯೊಲ್ →

ಪಾರಾಡಿ ಕರ್ಮಕೌಶಲದ ಪಾತ್ರ ವಹಿಸಿದ
ಅಪೂರ್ವ ರಮಣೀಮಣೀ ಸೌಭಾಗ್ಯ ನಿವೇದಿತ !
ಪ್ರಸಿದ್ಧ ವಿಜ್ಞಾನಿ ಜಗದೀಶ ಚಂದ್ರಬೋಸ್
ಸಂಶೋಧನಾ ಪ್ರವೃತ್ತಿಗೆ ಮೇಣ್ ಗ್ರಂಥಗಳ
ಪ್ರಕಟಣ ಕಾರ್ಯ ನಿರ್ವಹಣೆಗೆ ನಿವೇದಿತಳ
ನೆರವು ಅಪರಂಪಾರ ! ಮತ್ತೆ ಮತ್ತೆ ಮೇಣ್ಮತ್ತೆ
ಭುಗಿಲೇಳ್ವ ಸಂಕಷ್ಟಗಳಂ ಸ್ಫೂರ್ತಿಗಿಡಿಯೊಳ್
ಕಿಡಿಸಿ ಧನದ ಕೊರವಂ ಪೂರೈಸಿ ಓಜೆಯಂ
ಇನ್ನಿನಿತು ಓಜಿಸಿ ಬೆಳಕನಿತ್ತಳ್ ಸುಜಾತೆ !
ಮುಂದೆ ಸಾವಿರದೊಂಭೈನೂರ ಹದಿನೇಳರಾ
ಪುಣ್ಯದಿನ ಬೋಸ್ ವಿಜ್ಞಾನ ಮಂದಿರ ಉದಿಸಿದ
ಸಮಯೆ, ಆ ಸಂತಸದಿ ಮುಖತಃ ಪಾಳ್ಗೊಳಲ್
ಸೋದರಿ ನಿವೇದಿತ ಈ ಜಗದೊಳಿರಲಿಲ್ಲಂ !
ಆ ಸಂದರ್ಭದಲಿ ವಿಜ್ಞಾನಿ ಶ್ರೀ ಜಗದೀಶ
ಚಂದ್ರಬೋಸರ್ ಇಂತಪದೆಸೆಯ ತೀವ್ರದುಃಖ
ಭಾರದಲಿ ತಮ್ಮ ಸ್ಫೂರ್ತಿ ದೇವತೆಯ ನೆನೆದು
ಕಂಬನಿಯ ಕೋಡಿಯಲಿ ಕೃತಜ್ಞತೆ ಸಲಿಸಿದರ್ !
ಹತ್ತೊಂಭತ್ತನೇ ಅಕ್ಟೋಬರ್ ಸಾವಿರದೊಂಬೈನೂರ
ಹನ್ನೊಂದರ ಪುಣ್ಯದಿನದಂದು ಸ್ವರ್ಗಸ್ಥಳಾದಳೈ
ಭಾರತಕ್ಕೆ ಭಾರತವೇ ಶ್ರದ್ಧಾಂಜಲಿ ಅರ್ಪಿಸುವಂತೆ !
ಧನ್ಯೆ ! ಪರಮ ಧನ್ಯೆ, ನಿವೇದಿತ ! ತವಕಥನಂ
ನೆನೆದು ಕವಯಿತ್ರಿಯ ಮನ ಚಿತ್ತ ಪಾವನಂ !

—o—

# ಕಾಳೀ ನದೀ ತಟಾಕದಲ್ಲಿ

ಬ್ರಹ್ಮಗಿರಿಯ ಪದತಲದ ಸಮದಾಣದೊಲೆಸೆವ
ಗರಿಕೆಯ ಪಚ್ಚರನ್ನಹಸೆಯಲಿ ಕೂಡಿ ಕಾಲಾಡಿ
ಬಾಯಾಡಿ ಒಡಲ್ ಬಿರಿವನ್ನ ಪೊಚ್ಚ ಪಸುರುಂಡು
ತುರುಕರುಗಳ್ ಕೊರಳ್‌ಗೆಜ್ಜೆಯುಂ ಜಣಿ ಜಿಣಿರೆನಿಸಿ
ಊರಿಗಭಿಮುಖವಾಗಿ ಪೊರಡಲ್ಕೆ ನೊಲೆವಾಲ್
ತುಂಬಿ ಕೆಚ್ಚಲ್ ಬಿಗಿಯೆ ಎಳೆಗರುಗಳಂ ನೆನೆದು
"ಅಂಬಾ" ಎನುತ ಹೂಂಕರಿಸಿ ಆಕರಿಸಿ ತೀವ್ರ
ಗೊಂಡುದುದು ಪಜ್ಜೆಪಜ್ಜೆಯುಂ. ಸಂಜೆಗೆಂಪಿನ
ಪದಂಪು ಒಯ್ಯೊಯ್ಯನೆ ಮುಸುಗುತಿರಲ್ ಸಕಲತರ
ಪಕ್ಷಿಗೊರಳಿಂದುಣ್ಮಿದ ಸಂಧ್ಯಾಸ್ಫೂರ್ತಿಗೆ ಪುಟವಿಡೆ
ಜಗದಗಲ ಪೊಣ್ಮಿತು ಸಾನುರಾಗದ ಸಡಗರಂ!
ಸಂಧ್ಯಾಸಮೀರಂ ಅಲೆಯಲೆಯಾಗಿ ಬೀಸುತ
ಬರೆ ಒಯ್ಯನೆ ತಲೆಯಂ ತೂನೆವ ಗಿಡುಮರಂಗಳ್
ಮರ್ಮರಿಸಿ ಹಾಡುವಕ್ಕಿಗಳ ಸ್ವರ ನಿನದಕ್ಕೆ
ಶ್ರುತಿಯೂಡಿಸಿ ಬೈಗಿನ್ನೆಸಿರಿಯುಂ ಸೊಗಯಿಸಲ್
ದೂರವೆಟ್ಟನಮೇಲೆ ತಳತ್ತಳಿಪ ಪೊನ್ನರವಿ
ಕೆಮ್ಮುಗಿಲ ವಾರ್ಧಿಯೊಳ್ ಮಿಂದು ಪಡುವಣಕಿಳಿಯೆ
ರಂಜಿಸಿತು ಪೊಡವಿ ಪೊನ್ನರಾಗದಲಿ. ಮೇಣಾ,
ಪೂತ ಚೂತ ಬಗೆಬಗೆಯ ನಿಡುವಳ್ಳಿ ಗಿಡುಮರಗಳ್
ತುಂಬಿರ್ದ ನಿಡುದಾಣದೊಳ್ ವ್ಯೆಯೊಡೆದಿರ್ದಾ
ಗ್ರಾಮಂ ಕಿರುವನೆಗಳಿಂ ಸಾಲ್ಗೊಂಡು ನಿಂದತ್ತು
ಕಣ್ಗೆಂಬಾಗಿ.

ಗದ್ದೆ–ತೋಂಟಗಳ ಕೃಷಿಯ ಕಜ್ಜಮಂ
ಮುಗಿಸಿ ಮನೆಗೆ ಪಿಂತಿರುಗುತಿರ್ದ ಗ್ರಾಮೀಣರ್ →

ತಮ್ಮೊಡಂ ಗದ್ದೆಯ ಕೆಲಸಕೆಂದೈತಂದಿರ್ದ
ಪಾರ್ವತಿಯು ಕಾಣಿಸದಿರೆ ಅತ್ತಲಿತ್ತಲೆತ್ತಲ್
ಕಣ್ಣಿಟ್ಟು ನೋಡುತುಂ ಎತ್ತಪೋಗಿಹಳೆಂದೆಂದು
ತಮ್ಮತಮ್ಮೊಳ್ ಮಾತಿನಲಿ ಮುಳುಗಿ ಅಲ್ಲೆ ನಸು
ಪೊಳ್ತು ನಿಂತೊಡಂ ಎಲ್ಲಿಯುಂ ಕಣ್ಗೆ ಕಾಣದಿರೆ
ವೃದ್ಧೆಯೊರ್ವಳೆಂದಳ್ "ಅವಳಾಗಳ್ ಸವುದೆ
ಮನೆಯೊಳಿಲ್ಲಂ ಕಾಡಿಗುಯ್ದು ಕಡಿದು ತರಲಕ್ಕು
ಎನುತಿರ್ದಳ್, ಅಂತೆಯೆ ಸವುದೆಯೊಡಂ ಮನೆಕಡೆ
ತಾಂ ಮುಂದಾಗಿ ಪೋಗಿರಲಕ್ಕು".

ಆ ನುಡಿಯಂ
ಕೇಳ್ದೆಲ್ಲರ್ ನಿಶ್ಚಿಂತೆಯಿಂ ಗೃಹಪಥವಿಡಿದು
ನಡೆದಿರಲ್, ಕಣ್ಣಳತೆಯಲಿ ಅಣಬೆಗಳಂತೊಲು
ಸಾಲ್ಗೊಂಡು ಒಗ್ಗೂಡಿ ಪೈಯೊಡೆದ ಪಲವು ಶೀರ್ಣ
ಜೀರ್ಣಿತ ಕುಟಿಗಳಿದಿರ್ ತಾಣದೊಳ್ ಮಕ್ಕಳ್
ತಾಯ್ತಂದೆಯರಂ ನಿರುಕಿಸಿತ ತಮ್ಮ ತಮ್ಮ ಕಟೆ
ಯೊಳ್ ಸಣ್ಣ ಪುಟ್ಟ ಕೂಸುಗಳಾಂತು ನಿಂತಿರ್ದರ್
ಹಾದಿಯಲಿ ಕಣ್ಮನಗಳಂ ನೆಟ್ಟು. ಬೆಳಗಿಂದೆ
ಮನೆಯೊಳ್ ಪಿರಿಯರಿಲ್ಲದೆ ತುತ್ತುಗೂಳು ಕಾಣದೆ
ಪಸಿವೆ ತುಂಬಿ ಎಣೆಯಿಲ್ಲದಾತುರಂ ಮನದೊಳ್.
ಗ್ರಾಮ ಹಾದಿಯ ದೂರ ತಿರುವಿನಲಿ ತಮ್ಮವರ್
ಕಣ್ಗೆ ಕಂಡೊಡನೆ "ಓ ಬಂದರೊ ಬಂದರ್!" ಎಂದು
ಕೂಗಿ ಕೇಂಕರಿಸಿ ಸಾರಸಗಳವೊಲ್ ಕುಣಿ ಕುಣಿ
ದಾಡಿದರೆಲ್ಲರ್ ಹರಿಸಂಬಟ್ಟು! ನೋಣ್ ಒಡಲಿನಾ
ಪಸಿವೆಯ ಉರಿಗಿರ್ಚು ಕೆರಳ್ದು ಬಾಯಾರಿ ಜೊಲ್ಲು
ರಸಂ ಹಿಂಗಿದುದಾ ಚಣದಲಿ. ಮತ್ತಾಗಳುಂ →

ಎಲ್ಲರೊಡನಿರ್ದ ಪಾರ್ವತಿಯ ಕುವರಿ ಗಂಗಾ
ಬಾಲೆ-ಒಂಭತ್ತರ ಹೊಸ್ತಿಲಂ ದಾಂಟದಿರ್ದಾ
ಚಂಗೆನ್ನೆಯ ಮುಗುದೆ ಕಟಿಯೊಳ್ ವರುಷವೆರಡರ
ತಂಗಿಯಾಂತು ತಾಯ ನಿರೀಕ್ಷೆಯಲಿ ಕಣ್ಣಿಟ್ಟು
ಕಾದಿರ್ದಳ್. ಎಲ್ಲರ್ ಪಿಂತಿರುಗಿದೊಡಂ ತಮ್ಮ
ತಾಯಿಯುಂ ಕಣ್ಗೆ ಕಾಣದಿರ್ಕೆ ಮನನೊಂದು
ಕಳವಳಂಬಟ್ಟು ಎದುರ್ಗೆತ್ತ ಪಿರಿಯರ್ಕಳಂ
ಕೇಳಿದಳ್ ಕಾತರಿಸಿ "ಅಮ್ಮ ಬರಲಿಲ್ಲೇಕೆ?
ಒಡಲ ಪಸಿವೆಯಿಂದೆ ಸಿಸುವಳುತಿದೆ ಗೋಳಾಡಿ"
ಎನ್ನುತ ಮೊಗದಿ ಕಳವಳ ಸೂಸಿದುದಂ ಕಂಡು
ಪಿರಿಯಳೆಂದಳ್ "ಅವಳಾಗಳೆ ಸವುದೆಗೆಂದೆನುತ
ಕಾಡಿನೆಡೆಗೆ ಪೋದಳಲ್ತೆ ಇನ್ನು ಪಿಂತಿರುಗಿಲ್ಲವೆ
ಕುಟಿಗೆ?" ಆಗಳನೇಕ ಪೆಂಗಳೆಯರ್-ರೈತರ್
ಮುಂಗೆತ್ತು "ಇದೇನಚ್ಚರಿ? ಇನ್ನು ಬರಲಿಲ್ಲ
ಮೆಂದೊಡೆಲ್ಲಿಗುಯ್ದಿರಲಕ್ಕು? ಹೊಲದಿಂದವಳ್
ಮಧ್ಯಾಹ್ನಮೆ ಪೊರವಂಟಳಲ್ತೆ ಸವುದೆತರಲ್?"
ಎಂದುಮೆಂದು ಅಚ್ಚರಿಯಿಂ ಓರ್ವನೊರ್ವರುಂ
ಹೇಳಿ ಕೇಳುತುಂ ಅತ್ತಣಿತ್ತಣಂ ತಿರುತಿರುಗಿ
ನೋಡಿ ಎತ್ತಲುಂ ಕಾಣದಿರೆ ಗಂಗಾಬಾಲೆಯುಂ
ಕುರಿತು ನವಿರ್ ನೆರೆದ ಪಿರಿಯನೊರ್ವ ಕೇಳಿದಂ
"ಎಲೆ ಬಾಲೆ! ನಿಜಕ್ಕೂ ನಿನ್ನಮ್ಮ ಪಿಂತಿರುಗಿ
ಬರಲಿಲ್ಲವೇಂ?"
ಆಗಳಾ ಬಾಲೆ ಯೋಚನೆಯ
ಗಾವರದಿಂ ಬಣ್ಣಗೆಟ್ಟು ಮತಿಗೆಟ್ಟು ಪೇಳಿದಳ್
"ಇಲ್ಲಣ್ಣ! ಇಂತದುಂ ಸಟೆಯಾಡಲಕ್ಕುಮೇ?
ತಂಗಿಯುಂ ಉಣಲಿಲ್ಲದೆ ಅತ್ತು ಕರೆದು ಬಳಲ್ದು →

ಬಾಡಿರುವುದಂ ಕಾಣಿರ? ಈಗಳೇಂಗೈಯಲಕ್ಕೊ
ಕಾಣೆನಾಂ. ನಿಮ್ಮ ದಮ್ಮಯ್ಯ! ತಾಯಂ ಪುಡುಕಿ
ಕರೆತನ್ನಿ. ಕೈಮುಗಿದು ಬೇಡುವೆ" ಎಳಿದನಿಯುಂ
ಗದ್ಗದಿಸಿ ತಡೆತಡೆದು ಪರಿದಿರಲ್ ಕರುಳ್ಕುಡಿ
ಕರಗಿ ನೀರಾಗುವಂದದಿ; ಪಿರಿಯನಾಗಳುಂ
ಮನ ಮರುಗಿ ತಳ್ಕೈಸಿ ನುಲ್ನುಡಿಯೊಳ್ ನುಡಿದಂ
"ಮಗಳೇ ಇಂತೇಂ ಗಾವರಂ? ಇನಿತರೊಳ್ ಅವಳ್
ಪಿಂತಿರುಗಿ ಬಂದಪಳ್. ನೀಂ ಕೂಸಂ ಬೋಳೈಸು."
ಅಂತೆಂದ ಮಾತಿನೊಳ್ ವಿಶ್ವಾಸವಿಟ್ಟೊಡಂ
ದುಃಖವುಕ್ಕಿ ಕೊರಳ್ಗಟ್ಟಿ ವೃದ್ಧೆಯೊರ್ವಳ್
"ಅಳದಿರ್ ಮಗುವೆ! ಸವುದೆಯ ಹೊರೆಯುಂ ಭಾರಮಿರೆ
ನಡಿಗೆ ನಿಧಾನಮಲ್ತೆ? ತುಸು ತಾಳ್ದೊಡೆ ತಾನೆ ನಡೆ
ತಂದಪಳ್ ಪುಡುಕುವ ಕತಮಿಲ್ಲಂ" ಎಂದೆನಲ್,
ಮತ್ತಾಗಳುಂ ಇನ್ನೊರ್ವಳೆಂದಳ್ "ಬಿಡು, ಮಗಳೇ!
ಮನೆಮಾರು ಬಿಟ್ಟು ಮತ್ತೆನಿತು ಕಾಲ ಪೊರಗಡೆ
ಉಳಿಯಲಕ್ಕು ಪೇಳ್? ತುಸುವೊಳ್ತು ನಿರುಕಿಸಿದೊಡೆ
ಒಳ್ಳಿತುಂ. ಅವಳಿಲ್ಲಿರ್ದೊಡಂ ಎಂತಿರ್ದೊಡಂ
ಬೈಗುಗಪ್ಪುಗವಿಯುವ ಮುನ್ನ ಪಿಂತಿರುಗದಿರೆ
ಎಂತಾವುದು ಕಂದ! ನೀಂ ನಿರ್ಯೋಚನೆಯಿಂದಿರ್."
ಆಗಳಾ ಮಾತಿಂಗೆ ಮತ್ತೊರ್ವಳ್ "ಅಂತೆನೆ
ಕಳ್ತಲೆಗವಿವನ್ನಂ ಬಾರದಿರೆ ತರುವಾಯಿ
ಪುಡುಕಲಕ್ಕುಮೆ ಕಳ್ತಲೆಗವಿಯೊಳ್? ಈಗಳೇಂ
ಬೆಳ್ದಿಂಗಳ ಬೆಳಕಿಲ್ಲ; ಬೇಗನೆಲ್ಲಾದೊಡಂ
ಪುಡುಕಿ ನೋಡುವುದು ಲೇಸು,"
ಆಗಳ್ ಇನ್ನೊರ್ವಂ
ಬಾಯಿಕ್ಕಿಸಿದು ವ್ಯಂಗ್ಯನಗೆಯಂ ಪರಿಸಿ ಗಳಪಿದಂ 

"ಬಿಡು, ಬಿಡು.  ಹರೆಯದ ಹೆಣ್ಣು.  ಆರೊಡನೆಯೊ  ಕೂಡಿ
ಓಡಿ ಪೋಗಿರಲಕ್ಕು!  ಅಲ್ಲದೊಡೆ ಈ ತನಕ
ಕುಟಿಗೆ ಪಿಂತಿರುಗಲಿಲ್ಲಮೆನಲ್ಕೆ ಕತಮಿಲ್ಲಂ!"

"ಅಹಹ, ಏಂ ಮಾತುಬಿಡು.  ಇಂತಪ್ಪ ಪಸುಳೆಗಳ
ಬಿಟ್ಟು ಪೋಪುದೆಂದೊಡೆ ನಗೆಗೇಡಲ್ತೆ?  ಅವಳ್ಗೆ
ಪತಿಯಂ ಕಳೆಕೊಂಡ ದುಃಖ, ಒಡಲಿಗಿಕ್ಕುವ ದುಃಖ,
ಮುಂದೇಂಗತಿಯೆಂಬ ದುಃಖ;  ಈ ತೆರದೊಳ್
ಸೋತು ಸೊರಗಿರ್ಪಳ್.  ಇಂತಾರೋಪಮಂ ಕೇಳ್ದೊಡೆ
ಇನ್ನೇನೆನಲಕ್ಕು?  ಸಿಸುಗಳ್ ನೋನೋಯುತಿರೆ
ನೀಮಿಂಥ ಮಾತಿನೊಳ್ ಚಕ್ಕಂದಮೇಂ ಚೆನ್ನು?"
ಅಂತಾಡಿದ ಮಾತಿಂಗೆ ಮೊಗದಿರುವಿದ ತರುಣ
ಕುಡಿಮಿಾಸೆಯಂ ತಿರ್ದುತೆ "ಇಂತಿದೆಲ್ಲಂ ಬರಿದೆ
ತೋರುಗಾಣಿಕೆಯಲ್ತೆ?  ಏಗಳುಂ ಇದರೊಳ್
ಎಚ್ಚರಮಿರಲಕ್ಕು!"

ಅವನೆಂದ ಕಿಡಿಗೇಡಿಯ
ಮಾತಿನಿಂ ಕೆಲರ್ ನಗುತುಂ ಕೆಲರ್ ಸಿಡುಕುತುಂ
ಮೇಣ್ ಕೆಲರ್ ಪುಡುಕುವ ಬೆಸನದೊಳ್ ಮನಮಿಡೆ,
ನಾಲ್ಕಾರು ದಿಶೆಯಂ ಕುರಿತು ಈರ್ವರೀರ್ವರುಂ
ಕೂಡಿ ಪೊರವಂಟು ಪರಿಸರದ ಬಯಲು ಹೊಲಗದ್ದೆ
ಕಾಡು–ನಾಡುಗಳೆಡೆಯೊಳ್ ಸುತ್ತಾಡಿ–ಕಾಲಾಡಿ
ಕಣ್ಣಾಡಿ "ಪಾರ್ವತೀ!  ಓ ಪಾರ್ವತೀ!" ಎಂದು
ಮತ್ತೆ ಮತ್ತೆ ಮೇಣ್ಮತ್ತೆ ಕೂಗಿ ಕರೆದು ಸೋತು
ಬೇಸತ್ತು ಪಿಂತಿರುಗಿದರ್ ನೆಲೆವನೆಗೆ;  ಮೇಣ್
ಇರುಳ್ಗವ್ಪುಗವಿದೊಡಂ ಸವುದೆಗೆಂದು ಪೋದ
ಸುದತಿ ಕುಟೆಯ ಕಡೆ ಸುಳಿದಳಿಲ್ಲಂ.  ಪಸಿವೆಯಲಿ
ಮತ್ತನಾ ತಾಯಿ ಚಿಂತೆಯಲಿ ಬಿಕ್ಕಿ ಬಿಕ್ಕಳಿಸಿ →

ಅಳುತಿರೆ ಮನಕರಗುವಂದದಿ ಮಕ್ಕಳ್; ನೆರೆನೆಮಯ
ಮಡದಿ ತನ್ನ ಕುಟೀರಕೆ ಕರೆದುಯ್ದುಪಚರಿಸಿ
ಉಣಿಸಿಕ್ಕಿದೊಡಂ ತಾಯ ಆಕರದಿಂ ಮನಕೆ
ಸಮಾಧಾನಮಿನಿತಿಲ್ಲದೆ ತಹತಹಿಸುತ ಅತ್ತು
ಸೋತು ಬಳಲ್ದು ಬೆಂಡಾಗಿ ಕುಳ್ತಲ್ಲೆ ತೂಂಕಡಿಸಿ
ನಿದ್ದೆಗೆತ್ತರ್ ತುಸುಳ್ತಿನೊವ್ವೊಳ್. ನಿಶೆಯೆಂತು
ಅಡರ್ದುದೊ ತಣ್ಪೆಂತು ಮೂಡಿದುದೊ ತಿಳಿಯದೊಲ್
ಸಮಯಮುರುಳುತಿರೆ, ಮಿಂಚುಂಬಳದ ಸಿಡುಸೇನೆ
ತೆಕ್ಕನೆಯೆ ಮೈದೋರಿ ಹಾರಾಡಿ ಮಿಣುಮಿಣುಕಿ
ಮರುಚಣಂ ಕಣ್ಮರೆಸಿ ಮತ್ತೆ ಮಿಣುಕಿ ಬೆಳ್ಳಿಯ
ಚುಕ್ಕಿಗಳನಣಕಿಸಿ ಕಳ್ತಲೆಗೆ ಕಿಡಿ ನವಿರ್ಗಳ
ನೆರೆ ಮೂಡಿಸಿ ಮೆರೆದುದು ನೋಳ್ಪ ಕಣ್ ಮತ್ತಾಗಿ
ಅರಳುವನ್ನಂ! ಮತ್ತಾಗಳುಂ ನಿಶೆಯೊತ್ತಿ ನಿಡು
ಗಳ್ತಲೆಗವಿದು ಮನೆ ಮನೆಯ ದೀಪಕುಡಿ ನಂದಿ
ಲೋಗರೆಲ್ಲಂ ನಿದ್ದೆಯೊಳ್ ಮುಳುಂಗೆ ಸರ್ವತ್ರ
ಶಾಂತಿಯಾವರಿಸಿದುದು ಎಲ್ಲೆಡೆಯುಂ. ಓರೊರ್ಮೆ
ನಿಃಶಬ್ದದ ಮಸ್ತಕದ ಮೇಲೆ ಗರಗಸಮಂ
ಗರ್ರನೆಳೆದವೊಲ್ 'ಗೂ' ಎಂದು ಕೂಗುವುದೊಂದು
ಗೂಬೆ ವಿಕೃತಸ್ವರದಲಿ. ಮೇಣೊರ್ಮೆ ನರಿ–
ಗಳಿಂಡಿನ ಹುಯ್ಲು ಕೇಳಿದುದು. ಮತ್ತೋರೊರ್ಮೆ
ಕಿವಿಗೆ ಕಕ್ಕಸಮಾಗಿ ಪೊದಳ್ದುದು ಘನವೆತ್ತ
ಕೋಳ್ಮಿಗಗಳ ದನಿ. ಒಯ್ಯನೊಯ್ಯನೆಯ ನಿಶೆಯುರುಳಿ
ಉಷೆ ಮೂಡಿ ಬರಲ್ ಮೂಡಣದಿ ಬೆಳ್ಳನೆ ಬೆಳಕು
ಚೆಲ್ಲಿದುದು ಎಲ್ಲೆಡೆಯುಂ. ಆಗಳ್ ಮನೆಮನೆಯಾ
ಗೃಹಸ್ಥರ್ ನಿದ್ದೆಯಿಂದೆಳ್ದು ಮುಂಬಾಗಿಲಂ
ತೆರೆದು ಪೊರವಂಪು ಎಲ್ಲೆಡೆಯು ನಿಣುಕಿ ಕಣ್ಣಾಡಿ →

“ಓ ಪಾರ್ವತೀ!” ಎಂದು ಕೂಗಿ ಕರೆಯಲ್ಕೆ ಮರು
ದನಿ ಪೊಣ್ಮಿದುದು ಮೂಡುವೆಟ್ಟಂ “ಓ ಪಾರ್ವತೀ!”
ಎಂದು ಕಂಚು ಮಿಂಚಾಗಿ! ಆಗಳ್ ಇನ್ನಿದಂ
ಎಂತು ಬಗೆ ಹರಿಕುವೆಂದು ತಮ್ಮ ತಮ್ಮೊಳೆಲ್ಲ
ಬರಿದೆ ಮುಮ್ಮಾತಿನಾ ಮೋಡಿಯೊಳ್ ಮೈಮರೆತು
ಪೊಳ್ತು ಕಳೆಯುತಿರಲಾ ಪಾರ್ವತಿಯು ಎಳೆಗೂಸು
ನಿದ್ದೆಯಿಂದೆಳ್ದು ‘ಅಮ್ಮಾ’ ಎಂದಳ್ದುದು ಉಸಿರ್
ಕಟ್ಟಿ. ದನಿ ಕೇಳ್ದೋಡಿ ಬಂದ ಗಂಗಾಬಾಲೆ
ಕೂಸಂಪಿಡಿದೆತ್ತಿ ಕಟಿಯೊಳಾಂತು ಪೊರಗುಯ್ದು
ಪಿರಿಯರ್ಕಳಂ ಕುರಿತು “ಅಯ್ಯಾ, ಎನ್ನ ತಾಯಿ
ಸುದ್ದಿ ಏನಾದೊಡಂ ತಿಳಿಯಿತೇಂ ? ಎಲ್ಲಿಹಳ್ ?
ಈಗ ಬಂದಪಳೇಂ ?” ಎನುತ ಅಂಗಲಾಚಿದಳ್
ಕಣ್ಣೀರ್ ದುಂಬಿ. ಆಗಳೋರ್ವನೆಂದಂ “ಬಾಲೆ
ಈವೊಂದು ದಿನಂ ತಾಳ್ದು ನೋಡಿದೊಡೆ ವಿಷಯಂ
ತಿಳಿಯಲಕ್ಕು. ನೀಂ ಅನ್ನೆಗಂ ಸೈರಿಸು ನಿಜದಿ.”

“ಅಂತಾದೊಡೆ ನೀಮುಂ ಪೋಗಿ ಕರೆತರ್ಪಿರೇಂ ?”
ಎನಲ್ಕಾ ಬಾಲೆ ಆಸೆದುಂಬಿದ ನೋಟದಿಂ
ನೋಡುತ್ತೆ ಖಿನ್ನಮುಖಿಯಾಗಿ. ಚಿಣ್ಣ ಕೂಸಂ
ಜೋಗುಳಿಸಿ ಬೋಳೈಸಿ ಕಣ್ಣೀರ್ ಒರಸಿ ಮಿದು
ಮಾತಿನಿಂ ಸಂತೈಸುತಿರೆ ದುಃಖವೊತ್ತಿದುದು
ಮತ್ತೆ. ಆಗಳಾ ಬಾಲೆ ತಹತಹಿಸಿ ಗದ್ಗದಿಪ ಕಂಠದಿಂ
“ಅಯ್ಯಾ, ದಮ್ಮಯ್ಯ! ಕೂಸಳುತಿದೆ ಪರಕೆಗೈವೆ
ನಿಮ್ಮ ಜಸಕಾಗಿ. ಎಂತಾದೊಡಂ ತಾಯಿಯಂ
ಕಂಡು ಏಂ ಸಂಕಷ್ಟಮಿರ್ದೊಡಂ ಬಗೆಹರಿಸಿ
ಕರೆತಂದೆಮಗೆ ಉಪಕರಿಸಿಂ” ಎಂದು ಬೇಡಲ್
ದೈನ್ಯದಿಂ. →

"ಎಲೆ, ಮಗುವೆ ! ಬರಿದೆ ತಹತಸಿದೊಡೇಂ
ಬರ್ಕುಂ ? ಮನೆಯೊಳ್ ನುಚ್ಚಿಲ್ಲವೆಂದು ತೌರಿಗೆ
ಪೋಗಿರ್ದೊಡಿಂದು ಬೈಗುಗಪ್ಪುಗಪಿವುದರೊಳ್
ಪಿಂತಿರುಗಿಬಹಳ್. ಅನ್ನೆಗಂ ನೆರೆಮಕ್ಕಳೊಡಂ
ಕೂಡಾಡಿ ಪೊಳ್ತು ಕಳೆದೊಡಾಯ್ತು ಚಿಂತಿಸದಿರ್."
ಗಂಗಾಬಾಲೆ ಆ ಮಾತಂ ಕೇಳ್ದು "ಅಂತಿಪ್ಪೊಡೆ
ಎಮ್ಮನಿಲ್ಲಿ ಬಿಟ್ಟು ಪೋದಪಳೆ ? ಅಂತುಮಲ್ಲದೆ
ಪೇಳದೆ ಕೇಳದೆ ಹೋಹಲಕ್ಕುಮೆ ? ಇದಂ ಸೋಜಿಗ
ಮೆನಿಪುದೆನಗುಂ" ಎಂದುಮೆಂದು ಮನದೊಳ್ಬಗೆದು
ತಂಗಿಯ ಕಣ್ಬನಿಯ ಸೋವುತೊಯ್ಯನೆ ಬಲ್ಮೆಯಾ
ನಲ್ನುಡಿಗಳಿಂ ಸೈಪಿ ನುಡಿದಳ್ ಮತ್ತೆ "ಇದೇಂ
ಪೊಸದೆ ತೌರಿಗುಯ್ವುದು ? ಪೇಳದೆಂತು ಪೋದಪಳ್ ?
ಅಲ್ಲಿಗುಯ್ದೊಡೆ ಎಮ್ಮನುಂ ಕರೆದೊಯ್ಯದಿರ್ಪಳೆ ?
ಇದಂ ಬರೀ ಬೊಂತೆ ಮಾತೆನಲಕ್ಕು ಕೇಳಣ್ಣ !"

ಬಾಲೆಯ ಮಾತಿನಿಂ ಮನದೊಳ್ ಯೋಚಿಸಿ ಮತ್ತೆ
ಪೇಳಿದ,

"ಆಯ್ತಾಯ್ತು. ಏನಿರ್ದೊಡೀಗಳದಂ
ಸಹಿಸಿದಲ್ಲದೆ ಬೇರೆ ದಾರಿಯಿಲ್ಲಂ ಗಡಾ !
ನಮಗಣಂ ಏನೊಂದು ಪೇಳದಿರ್ಕೆ ಎಲ್ಲಿಗೆ,
ಯಾವ ಕಡೆಗೆ ಪೋಗಲಕ್ಕುಮೆಂಬುದೊರ್ ಸಮಸ್ಯೆ
ಯಾಗಿರ್ಕುಂ. ಇಂತಿದರೊಳ್ ಕಾದು ನೋಡುವುದೊಂದೆ
ದಾರಿ ಮಗಳೆ !"

"ಮನೆಯೊಳ್ ನುಚ್ಚಿಲ್ಲ ! ಕಾಳಿಲ್ಲ !
ಸವುದೆಯೂ ಇಲ್ಲ. ಪಸಿವೆಯುಂ ತಾಳಲಾರದೆ
ಕೂಸಳುತ್ತಿವೆ ಏಂಗೈಯಲಿ ? ಏಗಳುಂ ಇದೇ
ಪರಿಪಾಡೆನೆ ಈಗಳ್ ಮತ್ತಿದೊಂದು ಗೋಳ್ !

ತಾಯಿಲ್ಲದೆಂತಿರಲಕ್ಕು? ಆರಾದೊಡಂ ಕೃಪೆ
ದೋರಿ ತಾಯಂ ಕರೆತರ್ಪಿರಾದೊಡೆ ಕೈಮುಗಿವೆ.
ಕಾಲ್ ಪಿಡಿವೆ. ಕರುಣೆದೋರಿ ಕಾಪಿಡಿಂ."
"ಅಂತನೆ
ಸುಲಭಂ, ಪುಡುಕಿ ತರ್ಪುದು ಕಷ್ಟಂ. ಆದೊಡಂ
ನಾಮುಂ ಕೆರೆ ಕಟ್ಟಿಯು ಕಜ್ಜಕೆಂದು ದೂರಕೆ
ಹೋಹಲಕ್ಕು. ಆಗಳಲ್ಲೆಲ್ಲ ಪುಡುಕಿದರಾಯ್ತು."

ಆ ಮಾತಿಗೆ ಇನ್ನೊರ್ವ ಪಡಿನುಡಿದನಿಂತು,
"ಇದರ ಗೂಢತರಂ ಮನಕೆ ಸಂದೆಯಣಮಣಂ
ಮೂಡಿಪುದೆನೆ ಸಾಜಂ. ಆಮಾವ ಸಂಚಿನೊಳ್
ನಾಡಂ ಬಿಟ್ಟು ಪೋಗಿರ್ಪಳೊ ಅಂತಲ್ಲದೊಡಿದೇಂ
ಸವುದೆಗೆಂದು ಪೋದವಳಿನ್ನುಮೈತರದಿರ್ಪಳೆ ?"

ಆಗಳುಂ ವೃದ್ಧ ಮರನುಡಿದನಿಂತು "ಆ ಸಂದೆಯ
ಎನಗಿರ್ಕು೯ಂ. ಇಂತಿದು ಏಗಳುಂ ಸಾಧ್ಯ ಕಣ!
ಬಾಳು ಬರ್ದುಕಿನೊಳ್ ಸಕಲ ಆಶಾಪಾಶಗಳ್
ಮುಗಿಬಗಿಯಾಗದೆ ಮನಸಿಗೆಲ್ಲಿಯ ನಿಜಶಾಂತಿ ?
ಎಂತಾದೊಡಂ ಆಸೆಯುಂ ಪೂರೈಸಿಕೊಳ್ವೊಂದು
ಕತದೊಳಿಂತಿದೆಲ್ಲ ನಡೆಸುಗುಂ"
ಪಿರಿಯನೆಂದ
ಮಾತುಂ ಮನಂಗೆತ್ತೊಡಂ ಅರ್ಥೈಸಲಾರದೆ
ಮಿಣ್ಣನಿರ್ದ ಗಂಗಾಬಾಲೆಯುಂ ನೋಡುತುಂ
ತರುಣ ನುಡಿದನಿಂತು ಮತ್ತೆ "ಕೇಳ್" ಮಗುವೆ!
ಈವೊಂದು ದಿನ ನೋಡಿ ನೀನಜ್ಜಿಯ ಊರಿಗೆ
ಪೋಗುವುದೆ ಒಳ್ಳಿತೆಂಬೆ. ಗಂಗಾಬಾಲೆ ಚಣ
ಮಿಡುಕಿ ಕಣ್ಣೊಳ್ ಕಂಬನಿಯುಂ ಸೂಸಿ ಆತುರ
ಕಾತರಗಳಿಂ ಮನಃಕ್ಷೋಭೆಯಿಂ ಪೇಳಿದಳ್, →

"ಅಜ್ಜಿಯ ಮನೆಗುಯ್ಯುವುದೇಂ ಪೆರ್ಚಳಂ ? ನಮಗಾಗಿ
ತಬ್ಬಲಿಯಾದೀ ಪೆಣ್ಮಕ್ಕಳಿಗಾಗಿ ಎಲ್ಲರ್
ಪ್ರಯತ್ನಂಬಟ್ಟು ಪುಡುಕಿದೊಡೆ ಉಪಕಾರಮಕ್ಕು.
ಕೃಪೆಗೈದು, ದಯೆಗೈದು ಉಪಕರಿಸಿಂ ಅಣ್ಣಯ್ಯ !"
"ಆಯ್ತು, ಮಗುವೆ. ಆರೊಳ್ ಗಂಜಿಯಿರ್ಪುದೊ ಕೇಳಿ
ಕೂಸಿಗಿಕ್ಕಿ ನೀನು ಉಣ್ಣು" ಎಂದನೊರ್ವಂ.
ಎಲ್ಲರಂ ಮಿಣ್ಣನೆ ಖಿನ್ನಮುಖದಿಂ ನೋಡುತುಂ
ಅಳುತಿರ್ದ ಕೂಸನಾಂತ ಗಂಗಾಬಾಲೆ ತಾಂ
ಪಿಂತಿರುಗಿದಳ್ ಕುಟಿಗೆ. ಕಣ್‌ದಿಟ್ಟ ನೋಡಿತು
ಮೂಲೆ ಮೂಲೆಯುಂ ಮತ್ತೆ. ಒಳಗಾರಿಲ್ಲ. ಬರಿ
ಮಡಿಕೆ ನುಚ್ಚಿಲ್ಲ. ಗಂಜಿಯಿಲ್ಲ. ನೀರು ಇಲ್ಲ.
ಬಣಬಣ ಎನುತಿದೆ ನಿಃಶಬ್ದದ ವಿಚಿತ್ರತರ
ಗಾವರಂ. ಕೆಲಪದಂ ನಿಲ್ಲಲಾರದೇ ನಿಂತು
ಪಿಂತಿರುಗಿದಳ್ ನೆರೆಮನೆಯಂಗಣಕೆ. ಬಾಗಿಲ
ಹೊಸ್ತಿಲಲಿ ಕುಳಿತು ಹೊಂಬಿಸಿಲಲಿ ಮಿಂದು ಬೆಚ್ಚಗೆ
ಮೈಕಾಸಿಕೊಳುತಿರ್ದ ಶೀರ್ಣಿತ ಮುಖದಜ್ಜಿಯು,
"ಬಾಲೆ, ಇನ್ನೆಗಂ ನಿನ್ನ ತಾಯಿಯ ಸುದ್ದಿಯೇಂ
ತಿಳಿಯಲಿಲ್ಲಂ. ಈವೊಂದುದಿನ ಬಾರದಿರ್ದೊಡೆ
ಕಳವಳಕೆ ಕಾರಣಮಿರ್ಕು. ಎಲ್ಲಿಬರ್ದೊಡಂ
ಇಂದು ಪಿಂತಿರುಗದೆ ಗತಿಯಿಲ್ಲ. ಎಳೆಗೂಸಂ
ಬಿಟ್ಟು ಎನಿತುಗಾಲಂ ಪೊರಗಿರಲಕ್ಕು ಪೇಳ್ ?
ಎಂದು ಮುಗ್ಧದುಗ್ಧ ಭಾವದಿಂ ಪೆಣ್ಮಕ್ಕಳ
ಭಂಗ ಬವಣೆಯುಂ ನೋಡಲಾರದೆ ನೋಡುತಿರೆ,
ನೆರೆಮನೆಯ ಗೃಹಿಣಿ ಪೊರವಂದು ಮಕ್ಕಳಂ ಕೈ
ವೀಸಿ ಕರೆದಳ್ ಗಂಜಿ ಬಟ್ಟಲಂ ತೋರುತಂ.
ಮತ್ತಮಾಗಳ್ ವೃದ್ಧೆ ಇಂತೆಂದಳ್ "ಕೇಳ್ →

ಮಗಳೇ, ಈಪೊಳ್ತು ಅಂತಿಂತು ಆರಾದರುಂ
ಉಪಚರಿಸಿಯಾರ್.  ತರುವಾಯಿ...." ಎನುತುಂ
ಮಿಣ್ಣನೆ ನಿಡುಸುಯ್ದು ಸುಮ್ಮನಾದಳ್.  ಬಾಲೆ
ಆ ಮಾತಂ ಕೇಳ್ದೊಡಂ ಅರ್ಥೈಸಲಾರದೊಲ್
ಮೆಲ್ಲನೆ ಒಳಗುಯ್ದು ಅಳುಗೂಸಂ ತಳ್ಕೈಸಿ
ಕಣ್ಣೀರ್ ತೀವಿ ತೊನೆದು "ಸುಮ್ಮಸಿರ್ ಕಂದಾ !
ಅಮ್ಮ ಈಗಳೈತರ್ಪಳ್" ಎಂದು ನುಡಿದೊಡಂ
ಸುಮ್ಮನಿರದೆ 'ಅಮ್ಮ' ಎನುತಳ್ತು ಗೋಳಾಡಿ
ಕಂಬನಿಗರೆವ ಕೂಸಿನೊಡರೆ ತಾಂ ಅಳುತಳುತ
ಹಾದಿಯೊಳ್ ಕಣ್ಣಿಟ್ಟು ನೋನೋಳ್ಪ ಸಮಯಯೊಳ್
ಪೊಳ್ತುರುಳಿ ಪಗಲ್ ಮುಗಿಬಗಿಯಾಯ್ತು. ಬಳಸಂದ
ಬೈಗಿನೊಳೆ ಮಕ್ಕಳ್ ಬಳಲ್ದು ಸೊಪ್ಪು ಸೊಗಡಪ್ಪಿ
ಸೋಲ್ತು ಅಲ್ಲೆ ನಿದ್ರಿಸಿದೊಡಂ ತಾಯಿ ಪಾರ್ವತಿ
ಎಲ್ಲಿಯುಂ ಕಣ್ಗೆ ಕಂಡಳಿಲ್ಲಂ.  ಪುಡುಕುವರ್
ನೆರೆಯಲ್ಲಿ ಸುತ್ತಾಡಿ ಆವಳೀಯೆಡೆಯೊಳಿಲ್ಲಂ ;
ಆವ ಧೂರ್ತನೊಡನೆ ಊರ ಗಡಿಯಂ ದಾಂಟ
ಪೋಗಿರ್ಪಳೊ ಏಂ ಕತೆಯೊ! ಇನ್ನುಮೆಂದಿಗೂ
ಅವಳಾಸೆಯಂ ಬಿಟ್ಟು ಮಿಣ್ಣನಿರ್ಪುದು ಲೇಸು."
ಎಂದಾಡಿದರ್ ತಮ್ಮತಮ್ಮೊಳ್

ಮರುದಿನಂ
ಊರ ಅಣುಗರ್ ಬೋರೆ ಮರಗಳಂ ಪುಡುಕತಲಿ
ದೂರ ದೂರ ಸಾರ್ದು ನಿಡು ಬಯಲಂ ದಾಟ ವನ
ದೇಶಮಂಬೊಕ್ಕು ಮರಗಳನೇರ್ದು ಪಣ್ಗಳಂ
ಕಿತ್ತು ಕೆಲವಂ ತಿಂದು ಕೆಲವಂ ಬಿಸುಟು ಕೆಲವಂ
ಕೈಕೊಂಡು ನಗೆಮಾತನಾಡುತುಂ ಮುನ್ನಡೆಯೆ
ಭೋರ್ಗರೆದು ಪರಿವ ಕಾಳೀ ನದೀ ತಟಾಕಂ →

ಸೇರ್ದುದ ಅದರ ಪಾತ್ರದೊಳೆ ಸಾಲ್ಗಟ್ಟಿ ನಡೆದಿರೆ
ಅಪ್ಪರೊಳೋರ್ವನೆಂದಂ "ಸ್ವಲ್ಪ ದೂರ ಪೋದೊಡೆ
ಓ ಅಲ್ಲಿ, ಬೋರೆ ಮರಗಳ ಗುಂಪಿಹುದು. ಅದಂ
ಏಂ ಪೇಳ್ವೆನೊ! ಕಣ್ಣಿರ್ದರೆಲ್ಲರ್ ಕಣ್ತುಂಬ
ನೋಡಲಕ್ಕು ಆ ಮರಗಳಂ! ಏಗಳ್ ನದೀ
ನೀರುಂಡು ಪಚ್ಚಪಸುರ್ವೊತ್ತು ನಲ್ ಪಣ್ಗಳಿಂ
ತುಂಬಿರ್ಕುಂ!"

"ಅಂತಾದೊಡೆ ನಾಮೆಲ್ಲರಲ್ಲಿಗೆ
ಸಾರ್ದು ಒಡಲ್ ಬಿರಿವನ್ನಂ ಫಣ್ಗಳಂ ತಿಂದು
ಬರಲಕ್ಕು! ಪೊಳ್ತೇರುವ ಮುನ್ನಮೆ ಅಲ್ಲಿರ್ದೊಡೆ
ಲೇಸುಂ."

ಅದಂ ಕೇಳ್ದು ಎಲ್ಲರುಂ ನಡಿಗೆಯುಂ
ತೀವ್ರಗೊಳಿಸಿದರ್ ಬೋರೆ ಪಣ್ಗಳ ಆಸೆಯಿಂ.
ಪಜ್ಜೆಪಜ್ಜೆಗುಂ ಮುಂತೆ ಸಾರ್ದು ಕಂಡರ್
ದೂರದೊಳ್ ಸಿರಿಹೊನ್ನೆ ದ್ರುಮದಡಿಯಲ್ಲಿ ಚೆಲ್ಲಾ
ಪಿಲ್ಲಿಯಾಗಿ ಬಿದ್ದಿರ್ದ್ದೊಂದು ಕೆಂಬಣ್ಣದಾ
ಬಟ್ಟೆಯುಂ. ಆಗಳಚ್ಚರಿಯಿಂದೆ ಕಣ್ಣರಳಿಸಿ
ಬಳಸಾರ್ದು ನೋಡಿದೊಡೆ ಪೇಳ್ವುದೇಂ? ಅಮಮ! ಏಂ
ಘೋರಂ! ಏಂ ಕರುಣಾದ್ರ್ರದೃಶ್ಯಂ? ಆವ ವ್ಯಾಘ್ರಮೊ
ಪಾರ್ವತಿಯನೆಳೆತಂದು ಕೊಂದು ಮೆಯ್ಯ ಮಾಂಸಮಂ
ಕಿತ್ತು ತಿಂದು ಅರೆದೇಹಮಂ ಬಿಟ್ಟು ಪೋಗಿರ್ದುದು
ಉದರಭಾರದಿ ಗುಹೆಗಹ್ವರಾಭಿಮುಖವಾಗಿ!

—o—

# ಮಂಗಳರೇವಿಂ ಮುತ್ತಿನ ರೇವಿಗೆ

೧

ಪಡುವಲ್ ಪಣೆಯ ಮೇಲೆ, ಸಾಗರಿಯ ಪನಿಗಳ್
ಚಿಮ್ಮಿ ಕಿಡಿಕಿಡಿಯಾದುವೊ ಎನಲ್ಕೆ ತಳತಳಿಪ
ಬೆಳ್ಳಿಗಳ್ ನಿಣುಕಿ ನಿಜವಾರ್ಧಿಯಲಿ ಮೈದೋರ್ದು
ತುಳುತುಳುಕುವ ಜಲಂ ಬಜ್ಜರಮಯಮಾಗಿರ್ಕೆ
ಕಾಣದೊ, ದೇವ ಸನ್ನಿಧಿಯಂ ಜಲನಿಧಿಯಲಿ !
ಏಂ ಸೊಗಂ ? ಏಂ ದಿವ್ಯಂ ? ಏಂ ಸವಿಸ್ತರಂ ? ಆಹ,
ಯೋಜನ ಯೋಜನ ಯೋಜನ ಹಬ್ಬಿದೀ ಉಪಕೃತಿಯ
ನೋಡಿದನಿತು ಸಾಲದೀ ಕಣ್ಗಳಿಗೆ ! ಮೇಣ್
ಭಾವಿಸಿದನಿತು ಸಾಲದೀ ಮನೋ ಮಂಜರಿಗೆ !
ಸಾಯಂಸಮಯದ ತಣ್ಪು ವ್ಯೋಮನಂ ಮುತ್ತುತಿರೆ
ಪಡುವಣದಲಿ ಕಾಂಚನ ಕಾಂತಿ ತಾಂ ಪೊಳೆದತ್ತು
ಓಕುಳಿಯನೆರಚಿದವೊಲ್. ಗೂಡನರಸುತಲಿಹ
ಪಕ್ಷಿಸಂಕುಲಂ ಮಂಡಲಾಕಾರದೊಳ್ ಸುಳಿ
ಸುತ್ತಿ ಇಚ್ಛೆತನೆಲೆಗಿಳಿಯುತಿವೆ ಒಂದೊಂದಾಗಿ.
ತಂಗಾಳಿ ತೀಡಿತು, ಇನಿವಳ್ತೆನಿತೊ ಮೀರಿತು.
ಕತ್ತಲೆಯ ಸೆರಗು ಮುಸುಗುತಿತ್ತು ಇಳೆಯ ಮೇಲೆ.
ಕಾದಂಬನಿಗಳ್ ಮಿಣ್ಣನೆ ಚಲಿಸಿದುವಲ್ಲಲ್ಲಿ ;
ಬಾನ್ ನೆತ್ತಿಯಲಿ ರೇಖಾಚಂದ್ರಮ ಮೆರೆದಂ
ಸಪ್ತರ್ಷಿ ಮಂಡಲದ ಬಳಿಯಲಿ. ಎಳೆದಿಂಗಳ್
ಬೆಳಕು ಪಸರಿಸಿತು ತಿರೆಯೊಳ್. ಮಂಗಳರೇವಿನಲಿ
ನಾವಾಡಿಗರ ಪಯಣದುಜ್ಜುಗದ ಚಟಪಟಿಕೆ
ಬಿಡುವಿಲ್ಲದೆ ನಡೆದುದು ಹೊತ್ತು ಮೀರ್ಪನ್ನೆಗಂ →

ಆಗಳಾ ನಾವಾಡಿಗ ಯೋಚಿಸಿ ಪೇಳಿದಂ
ಕಿರಿಯರ್ಗೆ "ಎಲೆ, ನಾವಿಗರಿ ! ಪಯಣಕೀವೊಂದು
ಬೆಳುದಿಂಗಳ್ ಸಾಲದು, ಹಾಯಿಯನಿಳಿಸಿರೀಗ.
ಮುಂಬೆಳಕು ಮೂಡುವ ಮುನ್ನಮೆಯೆ ಮುಂಪಯಣಂ
ಕೈಕೊಂಡರಾಯ್ತು."

ಅಂತೆಂದ ಮಾತಂ ಕೇಳ್ದು
ನಾವಾಡಿಗರ್ ಹಾಯಿಯಂನಿಳುಹಿ ಪಯಣಿಸುವ
ವಿಚಾರಂ ಕೈವಿಟ್ಟು ಮಲಗಿದರ್ ಮುಸುಗಿಟ್ಟು.
ರಾತ್ರಿಯೆಂತುರುಳ್ದುದೊ ಅರಿತರಿಲ್ಲಂ; ತಂಗಾಳಿ–
ಯೆಂತು ತೀಡಿದುದೊ ತಿಳಿದರಿಲ್ಲಂ; ನಿಶ್ಶಬ್ದ–
ನೀರವತೆಯ ನಿರ್ಮಲ ವಾತಾವರಣದಲ್ಲಿ.

ಇಂದ್ರಮುಹೂರ್ತಮಡರಿ ಬರೆ ತಂಗಾಳಿ ತಣ್ಪು
ತಳೆದು ಬಡಗಣ ಭಿತ್ತಿಯ ಉಡುಗಣ ಶ್ರೇಣಿಯಲಿ
ಧೂಮಕೇತು ಮೂಡಿತದೊ ತೆಕ್ಕನೆ ಉಜ್ವಲಿಸಿ !
ಮುಂಪಯಣಕೆಂದೆದ್ದ ನಾವಿಗರ್ ಅದನೋಡಿ
ಸ್ವರ್ಣರಾಗದ ವೈಭವೋಪೇತ ಧೂಮಕೇತು ನಿಂದು
ಇಂತೀಗ ಮೂಡಿಬರೆ ಆವಾವ ಕತಮಿಕೆರ್ೂ
ಲೋಕಾಂತರದೊಳ್ ದೇವನೆ ಬಲ್ಲ ! ಈಗಳಾವು
ಪೊರಡಲಕ್ಕುಮೆ ಅಶುಭ ಸಮಯದೊಳ್ ? ಎಂದೆಂದು
ತಮ್ಮತಮ್ಮೊಳ್ ವಿಚಾರಕಾತರರಾಗಲ್ಕೆ
ಪಿರಿಯನೆಂದ ಕಿರಿಯರ್ಗೆ "ಧೂಮಕೇತು ನಿಂದು
ಮೈಗರೆವನ್ನೆಗಂ ನಾವೆಯಂ ಬಿಡಬೇಡಿರೈ.
ಧೂಮಕೇತಿನುದಯಮೊಂದೌತ್ಪಾತಕಂ ಕಾಣ್
ಆವ ರಾಜ್ಯಕೆ ಕುತ್ತೊ ! ಇನ್ನಾವ ಜಗತ್ತಿಗೆ
ಅಮಂಗಳವನೋ ಪೇಳುವರಾರ್ ? ಇದಂತೂ
ಒಳ್ಳಿತಲ್ತು ಲೋಕಕೆ. ನಾಮೆಚ್ಚರಮಿರಲಕ್ಕು"

ಕೋಳಿ ಕೂಗಿತು ರೇವಿನಲಿ. ಇಂದ್ರ ಮುಹೂರ್ತಂ
ಕಳೆದು ಶುಕ್ರನಳಿದಂ. ಧ್ರುವ ಮ್ಲಾನವಾದಂ
ಸಪ್ತರ್ಷಿಮಂಡಲ ಅಸ್ತಮಿಸಿ ಚಂದ್ರನಿಳಿದಂ
ಅಸ್ತಾದ್ರಿಯ ಮಸ್ತಕಕೆ, ಬಡಗಣ ಭಿತ್ತಿಯುಂ
ನೋಡುತಿರೆಯಿರೆ ಧೂಮಕೇತು ತಾಂ ಮೈಗರೆದು
ಸುಂದರ ಸುವರ್ಣರೇಖಾ ವಿನ್ಯಾಸಮುಳಯೆ
ಕಳ್ತಲೆಯು ಕಾವಳಿಸಿದಂತಾಯಿತಾ ತಾಣಂ.
ಮತ್ತಾಗಂ ಉಡುಗಣಗಳ ಸಂದೋಹ ಕರಂಗಿ
ಮೂಡಣದ ಮೂಡುವೆಟ್ಟನ ಮೇಗಡೆ ಮುಂಬೆಳಕು
ತುಳುತುಳುಕಿ ಎಳೆಬೆಳಕು ಪಸರಿಸಿತು ಲೋಕದೊಳ್.
ಗಿಡುಮರಗಳಲಿ ಪಕ್ಷಿಗಳೆಚ್ಚೆತ್ತು ಕೊರಳೆತ್ತಿ
ಸುಪ್ರಭಾತಂ ಪಾಡುತಿರ್ದಂತೆಯೆ ಅರುಣ
ಕಿರಣಂ ಇಣಿಕಿದುದು ಗಗನ ಭುವಿಗಿರ್ದ ಬೆಸುಗೆಯ
ಬಿಡಿಸಿದವೊಲ್. ಆಗಳ್, ಪಿರಿಯ ನಾವಾಡಿಗಂ
"ಇನ್ನಾವು ನಾವೆಯಂ ಪಟವೇರಿಸಿ ಪೊರಡಲಕ್ಕು.
ಮುತ್ತಿನಾ ರೇವು ಬಲು ದೂರಮಿರ್ದುಂ ಮುಟ್ಟುವೊಡೆ
ಕತ್ತಲು ಕವಿವುದು ಕಾಣ್. ಎಲ್ಲರ್ ಚಣಚಣಂ
ಕಟ್ಟೆಚ್ಚರಮಿರಲಕ್ಕು. ಕಾಲಂ ಕೆಟ್ಟಿರಲ್
ಪಜ್ಜೆ ಪಜ್ಜೆಗು ಗಂಡಂ ಕಾದಿರ್ಕುಂ ! ಎಚ್ಚರ !"
ಪಿರಿಯನಪ್ಪಣೆಯುಂ ದೊರೆಯಲ್ಕೆ ನಾವಿಗರೆಲ್ಲಂ
ಸಾಗರಕೆ ಕೈಮುಗಿದು ಪಾಡುತ್ತ ಹುಟ್ಟುಗಳ
ಬಿಗಿವಿಡಿದು ನೀರಂಬಗೆಯುವ ತೆರದಲಿ ಹುಟ್ಟು
ಹಾಕುತಿರೆ ನಾವೆ ಅಲೆಯುಬ್ಬರವ ಏರಿಳಿದು
ಸಾಗಿದುದು ಸಾಗರದಲಿ, ದೂರ–ಬಹುದೂರದ
ಮುತ್ತಿನ ರೇವಂ ಕುರಿತು. ಪೊಳ್ತೇರುವ ಮುನ್ನಮೆ
ಸಾಗಿದುದು ನಾವೆ ಗಾವುದ ಗಾವುದ ದೂರ.

→

ಕಡಲಲೆಗಳ್ ತೆಕ್ಕನೆ ಮಂತ್ರಮುಗ್ಧವಾದುವೊ
ಎಂದಚ್ಚರಿಬಡುವವೊಲ್ ಶಾಂತವಾಗುತ್ತೆ ತರೆ
ನಾವಿಗರ್ ಬದುಕಿದೆವೆನುತ ಸಂತಸದಲಿ
ತಲೆವಾಗಿ ಕೈಮುಗಿದು ನಮಿಸಿದರ್ ಮತ್ತೆ ಮತ್ತೆ
ಮೇಣ್ಮತ್ತೆ ತಮ್ಮ ಕುಲದೈವವಂ ತಮ್ತಮ್ಮ
ಮನದೊಳ್ ನೆನೆಯುತ ಅಶ್ರು ಮುತ್ತುಗಳಂ ಸೂಸಿ.

ಆ ಬಳಿಕಂ ನಾವಿಗರ್ ಪೊಚ್ಚ ಪೊಸ ಉಸಿರಂ
ಪಡೆದವೊಲ್ ನಡೆಸಿದರ್ ನಾವೆಯುಂ ಮುತ್ತಿನಾ
ರೇವಿನೆಡೆಗೆ. ದೂರತೆಂಕಣದೊಳ್ ಮುನ್ನಡೆದ
ಬಿರುಗಾಳಿ ಭೋರನೆ ಜಡಿದು ಭೀಮಿಸುತ್ತಿರಲಲ್ಲಿ,
ಪ್ರಳಯದ ರುದ್ರ ಭಯಂಕರ ಅಲೆಗಳ್ ಮೇರೆ
ಮೀರೆಳ್ದುದು ಮುಗಿಲಂ ಮುಟ್ಟುವವೊಲ್ ನೋನೋಡಿ
ಗಡಗಡ ನಡುಗುತಿರೆ ಭಯ ಭೀತಿಯು ಗಾವರಂ
ಕಾವಳಿಸಿ ತನುಮನಗಳ್ ಮುಚ್ಚಿಗೆ ಸಂದುದೋ
ಎನೆ ನರಳಿ ಬಳಲ್ದುದು ಒಡಲ್ ಬಳ್ಳಿಯೊಳ್ ಮಹಾ
ಪ್ರಾಣಂ ಸುಖದುಃಖಗಳ ಆಗರವಾಗಿ ಕಣ !

ಓವೊ, ರಚಯಿತ್ರಿಯ ರಚನಾಕೌಶಲಕೊಂದು
ಪುಟ್ಟ ಕಣವೆನೆ ಪೊದುಳ್ದುದೀ ಕಥಾನಕ ರಸಂ
ಮನಃಚಿತ್ರ ಮಂಡಲದ ಕಿರಿಮೂಲೆಯೊಳ್ ತಾನುದಿಸಿ.

—o—

# ಸ್ವಾತಂತ್ರ್ಯದ ಸೆಲೆ

ತಾಯಂದಿರಾ, ಹಿರಿಯರಿರಾ, ಕಿರಿಯರಿರಾ, ಕೆಳೆಯ
ಕೆಳತಿಯರಿರಾ, ಅಣ್ಣತಮ್ಮಂದಿರಾ, ಮೇಣ್ ಅಕ್ಕ
ತಂಗಿಯರಿರಾ ತವ ಕರುಳ್ ಮಿಡಿವನಕ ಕರುಣ ಕತೆಯ
ಕೇಳುವಿರ? ತಾಳುವಿರ? ತಾಳ್ದು ಮೂರ್ಖ ಮನದ ಕಾಳ
ತೆರೆಯ ಕತ್ತರಿಸಿ ಸಂಕಟ ಪರಿಹರಿಸುವಿರಾ? ಕರುಳ್
ಕತ್ತರಿಪ ಸಂಕಷ್ಟದಿಂದೊರೆವೆ ಕಿವಿಗೊಟ್ಟು ಕೇಳಿ!
ಹೆಣ್ಣು ಗಂಡೆಂಬ ಕ್ರೂರ ಭೇದವ ಬದಿಗಿಟ್ಟು ಮೇಣ್
ನೀನು ತಾನೆಂಬ ಸ್ವಾರ್ಥಭಾವವ ಕಂಡರಿಸಿ ಕೇಳಿ!
ಇಂತೊಂದು ಭಂಗಬವಣೆಯೆಲ್ಲವ ಕಳೆವೊಂದು ದಿವ್ಯ
ಜೀವನಂ ಪಚ್ಚೆಯಾಗಿ ನೊಂದವರ ಕಂಬನಿಗಡಲ್
ಆರಿ ಬತ್ತಿ ನಿಚ್ಚಂ ಸ್ವಾತಂತ್ರ್ಯದ ಸವಿಯಂ ಸವಿದು
ಜಾಣದಿಂ ಸೊಗದಿಂ ನಲವಿಂ ಕೂಡಿ ಬರ್ದುಕಿ ಬಾಳ್ಗೆ!

ಸುಮತಿ ಯದುನಾಥರೆನಿಪಾ ದಂಪತಿಗಳ ಮನೆ ಬೆಳಗೆ
ಸುಮಿತ್ರೆ–ಸುಚಿತ್ರೆಯೆಂದೆಂಬ ಅಭಿಧಾನಮುಳ್ಳ ನಲ್
ಸುತೆಯರೀರ್ವರ್ ಸಂಜನಿಸಿ ಬಾಳ್‌ಬದುಕು ಸೊಗಮಿರ್ಕೆ
ಹದಿಹರೆಯದ ಔರಸಪುತ್ರಿ ಮುಗ್ಧ ಸುಮಿತ್ರೆ ಬಾಳ್
ಬೊಕ್ಕ ತರುಣದೊಳ್ ದುರ್ದೈವದಾಣತಿಯಿಂ ವೈಧವ್ಯ–
ಮೊದವಿ, ಮಂಗಳದ್ರವ್ಯ ಕಳೆದು ತಾಯುಡಿಯ ಮಗುವಾಗಿ
ಪಿಂತಿರುಗಿ ಬರೆ, ಶಾಲೆಗಾಣದೆ ಹಸೆ ಹಾಡು ಹಬ್ಬಗಳ
ಮಾಣದೆ ಮನೆಯ ಕಜ್ಜದೊಳ್ ಜನನಿಗೆ ನೆರೆವೀಯುತಲಿ
ದುಃಖದ ಗಣಿಯೈಸಿ ನಿರುತಂ ಪಂಜರದ ಗಿಳಿಯಾಗಿ
ಕುಲಾಚಾರಕೆ ಕಟ್ಟು ಬಿದ್ದು ತಲೆಯಮೇಲೆ ಸೆರಗಂ
ಹೊದ್ದು ಒಳ ಮನೆಯೊಳ್ ಕಾಲಯಾಪನೆಗೈಯುತಿರಲ್

→

ಅರಿವುದೇ ಜೀವನಂ ಮೇಣ್ ಜೀವನದುದ್ಧರಣಂ
ಎನೆ ನಂಬು. ಈ ಜಗಂ ವಿಶಾಲಮಿರಲ್ ದುಃಖಮೇಕೆ ?
ನೀಂ ಚಿಂತಿಸದೆ ಮಿಣ್ಣನಿರು. ನಾನದಂ ಬಗೆಹರಿಪೆಂ.
ಈದಿನಂ ಶಾಲೆಯೊಳ್ ಪಾಠಗೀಟದುಪಟಳಮಿರದೆ
ನಾಟಕದ ಅಭ್ಯಾಸಂ ಮಾತ್ರಮೇ ಇರ್ದು, ಆನಿದಂ
ಅಭ್ಯಸಿಸಿ ಜಾಣೆ ಎನೆ ಕೀರ್ತಿವೆತ್ತೆ. ನಾಳೆ ಕಿರೀಟ
ಕರ್ಣಕುಂಡಲಗಳಿಂದೊಪ್ಪಿ ಶ್ರೀಗಂಧ ಮಾಲ್ಯಮಂ
ಧರಿಸಿ, ಮಣಿಮಯ ಒಡವೆ ತೊಟ್ಟು, ಕೌಶೇಯ ವಸ್ತ್ರಮಂ
ಉಟ್ಟು ನಿಜಪಾತ್ರದೊಳ್ ಬಾಲಕೃಷ್ಣನೈದುವೆ ಕಾಣ್ !
ನೀನೆನ್ನ ಅಭಿನಯಮಂ ಕಾಣಲ್ಕೆ ಪಿಂಜರಿವರೇಂ ?
ಅಕ್ಕ ! ನೀ ಬಾರದಿರೆ ಆನೆಂತು ಪೋದಪೆಂ ಪೇಳ್ ?
ಇದಂ ಎಂದೆಂದಿಗೂ ಅಸಾಧ್ಯ ಎನೆ ನೀ ಮನದೊಳ್
ಯೋಚಿಸಿ ತಿಳಿಯೈ" ಎಂದಳ್.

"ತಂಗಿ, ಇದೇನೀ ಹಠಂ ?
ಅಪ್ಪ ಅಮ್ಮ ಅಹುದೆನೆ ಒಲ್ಲೆನೆಂಬೆನೆ ? ನಿನ್ನ ಕೃಷ್ಣ
ಪಾತ್ರಮಂ ಕಣ್ತುಂಬ ಕಾಂಬಾಸೆಯುಮೆನ್ನ ಮನದಲಿ
ತುಂಬಿಹುದು. ಅಲ್ಲಮೆಂದೊಡೇಂಗೈವುದು ಪೇಳ್?" ಎನುತ
ಕಂಬನಿ ಮಿಡಿದಳ್ ಮತ್ತೆ.

"ನೀನಿಲ್ಲದ ಸಿಂಗರ ಬರಿ
ಬಂಜರಮೆನೆ ನೀನಿರದೆಲ್ಲಿಯ ಅಭಿನಯಂ ತೆಗೆ ತೆಗೆ.
ಎಂತೊಪ್ಪುವೆನದನಾಂ ? ಎನ್ನಭಿನಯಮಿದೇಗಳುಂ
ಇರ್ಪುದೆಂದು ಭಾವಿಸದಿರ್. ಜಗದಿರವರಿತು ಹಠದಿಂದೆ
ಗೊಡ್ಡುನೀತಿಯಂ ಬದಿಗೊತ್ತದಿರೆ ನವೋದಯಮೆಲ್ಲಿ?"
ಮೊಗಂ ರಂಗೊತ್ತಿ ಕಂಚುಮಿಂಚಾಗಿ ನುಡಿದ ಅವಳಂ
ಬೆದರಿದವೊಲ್ ನೋಡುತಿರೆಯಿರೆ ಮತ್ತೆ ಸುಚಿತ್ರೆ "ಅಕ್ಕ,
ಆನೆ ಅಪ್ಪನಂ ಕೇಳ್ವೆಂ ಬೆದರದಿರ್. ಬರಿದೆ ಕೇಳೆ →

ಕೊಡುವರಾರ್ ಪೇಳ್ ? ಭವದಿ ಹದನರಿತು ಕಾಡಲಕ್ಕು;
ಬೇಡಲಕ್ಕು; ಗೋಳಿಡಲಕ್ಕು ಎನೆ ಎಲ್ಲದರೊಳಾನೆ
ಸಲ್ವೆಂ;" ಎನಲ್ ಈರ್ವರ ಮೊಗವರಳ್ದುದು, ಮನದಲಿ
ಆಶಾಕಿರಣಂ ಮೂಡಿ. ಆಗಳ್ ನುಡಿದಳ್ ಸುಮಿತ್ರೆ
ಹೆಣ್ಣು ವಿಧವೆಯಾದೊಡೆ ಕಟ್ಟುನಿಟ್ಟು; ಪುರುಷರಿಗಿಲ್ಲ
ಆವ ಶಾಸ್ತ್ರ ಸೂತ್ರ; ಇದೆನಿತೆನಿತು ಕೂರಂ ?" ಎನಲ್
ಸಂಕಟವುದಿಸಿ ಬಿಕ್ಕು ಬಿಕ್ಕಳಿಸಿ ಕಂಬನಿ ಮಿಡಿದಳ್.

"ಇಂತಪ್ಪ ಅನ್ಯಾಯವಂ ಅರಿತು ಪಿರಿಯರ್ಕಳ ಮಾತು
ವೇದವಾಕ್ಯಮೆಂಬವೊಲ್ ಎಲ್ಲರ್ ಮರುನುಡಿಯದೊಪ್ಪಿ
ಕೊಂಬುದು ತಪ್ಪಲ್ತೆ ? ಅಕ್ಕ, ಆವೊಂದು ವ್ರತವಂ
ಕೈಕೊಳ್ವ ಮುನ್ನ ಆದ್ಯೋಪಾಂತಮರಿಯುವ ಪ್ರಯತ್ನ
ಪಡದಿರ್ದೊಡೆಂತು ತಪ್ಪು ಒಪ್ಪುಗಳ ವಿಮರ್ಶೆ ಪೇಳ್ ?

"ಪಿರಿಯರ್ ವಿಮರ್ಶೆಗೈಯದಿರ್ಪರೆ ? ಇದನೆಂತು ಬಾಯ್
ಬಿಟ್ಟು ಪ್ರಶ್ನಿಸುವೆಯ್ಯೆ! ಇದಂ ಬಲ್ ಸಂಕಷ್ಟ ಕಾಣ್ !"

"ಅಂತೆಂಬುದರಿಂದಲ್ತೆ ಇಂತೀ ಜೀವ ಸಂಕಟಂ ?
ನಮ್ಮಾ ಬದುಕು ಪರರ್ ನಿರ್ಣಯಿಸಿದೊಡೆ ನಿಜ ನ್ಯಾಯ
ಕೈಗೂಡಲಕ್ಕುಮೆ ? ಒಳಗಣ್ಣು ತೆರೆದು ನೋಡುವುದೇ
ಜೀವನ್ಮುಕ್ತಿಯಲ್ಲದೆ ಬಿಳಿಪತ್ತಲಮುಟ್ಟು ಮನೆಯೊಳ್
ಕುಳಿತುಕೊಂಬುದಲ್ಲಂ !"

"ದಿಟ್ಟೆನೀ ! ಆದೊಡೇಂ ? ಪೆಣ್ಣು
ಪೆಣ್ಣಲ್ತೆ ? ಪೆಣ್ಣು ನಿರ್ಣಯಿಸಿದೊಡಂ ಕೇಳ್ವರಾರ್ ?"

"ಅಕ್ಕ, ಇಂತಳ್ಕಿ ತಲೆಬಾಗಿದೊಡೆ ಜಸಮುಂಟೆ? ಪೇಳ್?
ಶಾಸ್ತ್ರಗೀಸ್ತ್ರಗಳ ಬದಿಗೊತ್ತಿ ಜೀವನ ಸಾರ್ಥಕತೆಯ
ಪಾತ್ರವಿಲ್ಲದೆ ಬರ್ದುಕಿದೊಡೇಂಬಹುದು ತಿಳಿದು ನೋಡು !
ನೀಂ ಮಂಗಳದ್ರವ್ಯ ಬಾಹಿರೆಯಾಗಿ ಲೋಕದ ಬೆಳಕಿಗೆ
ದೂರಾಗಿ ಏಂ ಸಾಧಿಸಿದೆ ಪೇಳ್ ?" →

ಆಗಳ್ ಸುಮಿತ್ರೆ
ಗಗನದೆಡೆಗೆ ಕೈದೋರ್ದು "ಎಲ್ಲಮವನ ನಿರ್ಣಯಮಲ್ತೆ?"
"ತೆಗೆ, ಇದೆಲ್ಲ ಪುರಾಣ ಕಥೆಯಲ್ತೆ" ಎನಲ್ಕಾ ತಂಗಿ,
ನಿಟ್ಟುಸಿರ್ವಿಟ್ಟು ದುಃಖದುಗುಡದಲಿ ನೊಂದು ನುಡಿದಳ್
"ಅಂತೆನಲ್ ಕೇಳ್ವರಾರಿಹರಿಲ್ಲಿ ? ಮಿಕ್ಕು ಮೀರಿದಾ
ಬಲಮುಳ್ಳರೊಡಂ ಹೋರಾಟ ಸಲ್ಲಂ !"
"ಅಕ್ಕ, ನಂಬಿ
ಇಂತೆಂದೊಡೆ ಜನುಮ ಜನುಮಾಂತರಕ್ಕೂ ಪಥ್ಯಮಿದೇ
ಅಲ್ತೆ ? ನೀಂ ನಿನ್ನೊಳ್ ತಿಳಿವು ಮೂಡಿಪುದೆ ಒಳ್ಳಿತೆಂಬೆ.
ಅಕ್ಕ ಕೇಳ್ ! ಪಿಂತೆ ಪತಿಯ ಚಿತೆಯೊಳ್ ಸತಿಯಂ ನೂಂಕಿ
ಕಿಚ್ಚಿಕ್ಕುತಿರ್ದುದು ಸದ್ಧರ್ಮಮೆನಿಸಿತ್ತು. ಆ ಕ್ರೂರ
ಪದ್ಧತಿ ಅಳಿದುದು ಕಡ್ಡಾಯದಿಂದಲ್ತೆ ? ಅಂತೆಯೇ
ಪೋಗಲಕ್ಕುಮಿದು ಕಡ್ಡಾಯದಿಂ !"
"ಭಗಿನಿ, ಆಗಳದು
ಜಗದ್ದೃಷ್ಟಿಗೆ ಬೀಳುತಲಿರ್ದ ಕರುಣೆಯಿಂ ಮರುಕದಿಂ
ನೊಂದು ಕಡ್ಡಾಯದಿಂದೆ ಕೈವಿಡಲ್ ಕಾರಣಮಾಯ್ತು.
ಈಗಳಿದು ತೆರೆಮರೆಯ ಕಾಟಮಲ್ತೆ ? ಬಹುಮತಂ
ಅಂತಿರ್ಕೆ ದುಃಖಿಸುವವರಾರ್ ನೋಯುವವರಾರ್ ಪೇಳ್ ?"
"ಕೇಳ್ ಅಕ್ಕ ! ನಾವೆಲ್ಲ ಮೂಕಮಿರುವುದರಿಂದಲ್ತೆ ?
ಬಿಳಿಪತ್ತಲಮುಟ್ಟು ಒಳಮನೆಯೊಳಿಹುದು ಒಪ್ಪಿತಂ !
ವಿಧವೆಯರ ಮಂಡೆಯಂ ಮುಂಡನಗೈವುದು, ಬಾಲ್ಯದೊಳ್
ವಿವಾಹಗೈವುದು, ಆರ್ಥಿಕ ವೈಯಕ್ತಿಕ ಸ್ವಾತಂತ್ರ್ಯಮಂ
ಕಸಿದು ಒಳದೂಡುವುದು ಮುಂತಪ್ಪ ವಿಚಾರಂ ಇಂದು
ಸದ್ಧರ್ಮಮಿರಲ್ ನಾಮದನೊಪ್ಪಿ ಬದ್ಧಮಿರುವುದುಂ
ನಮ್ಮಯ ಪತನಕೆ ಕಾರಣಮಲ್ತೆ ? ಯೋಚಿಸದೆ ಅರಿತು
ಬಾಳದೆ ಪಶುತನದಿಂದೊಪ್ಪಿ ಸಗ್ಗಕೆ ಸಲ್ವುದೆಮಗೆ 

ಸರಿಯಾದ ಶಾಸ್ತ್ರಿ ! ಎಂಬುದಂ ತಿಳಿದು ನೋಡೈ ಮನದಿ !
"ಜಗದ ಕಣ್ಗೆ ಬೀಳ್ವಂತಿದಂ ಬೆಳಕಿಗಿರ್ಕಿ ಸುಭದ್ರ
ಕೋಂಟೆಯಂ ಕಟ್ಟಿ ಕೆಡಗಲಕ್ಕು ! ಮತಿಹೀನರ ಅರ್ಥ
ಹೀನ ಶಾಸ್ತ್ರಂಗಳಂ ಹಾಳು ಬಾವಿಗೊಗೆದೊಡೆ ಬದುಕು
ಹಸನಪ್ಪುದು" ಎನುತಿರ್ದ ವೇಳೆಯೊಳ್ ಸುಮತಿ ಒಳಬಂದು
"ಏಂ ನಿಮ್ಮೊಳ್ ಬಲ್ ಘನ ವಿಚಾರ ನಡೆದಿರ್ಕುಮಿಂದು ?"
ಎನಲ್ಕೆ ಸುಚಿತ್ರೆ ತಾಯಿಗೆಲ್ಲಂ ತಿಳಿಸಿ ಪೇಳಿದಳ್,
"ನಾಳೆ ಎನ್ನೊಡನೆ ಅಕ್ಕನಂ ಕಳುಪಿ ಮುಸುಕು ತೆರೆಸದೆ
ಸಲ್ಲದೆನ್ನ ಶ್ರೀಕೃಷ್ಣ ಪಾತ್ರಾಭಿನಯಂ !" ಅದರ್ಕಾ
ಮುಗ್ಧೆ ಮನಮಿಡುಕಿ ಪೇಳಿದಳ್ "ಬೇಡ ಮಗಳೇ ! ದಿಟ್ಟ
ತನದ ಈ ಸಾಹಸಂ !"
ಆಗಳ್ ಯದುನಾಥಂ ಗಮಿಸಿ
"ಬಿಡು ಮಗಳೆ! ವಿಧವೆ ಪೊರಗುಯ್ದೊಡದು ನಗೆ ಪಾಟಲಲ್ತೆ?
ಏನಿರ್ದೊಡಂ ಮನೆಯೊಳಗಕ್ಕು. ನಮಗಳವೇಂ ಲೋಕ
ವ್ಯವಹಾರಂ ? ಇನ್ನಿದರ ಸುದ್ದಿ ಎತ್ತದಿರ್" ಎಂದು
ಉಚ್ಚ ದನಿಯೊಳ್ ಬಿತ್ತರಿಸಿ ನಡೆದನೂರೊಳಗೆ.
ಅಕ್ಕ
ತಂಗಿಯರ್ ಅಂಗಣದಿ ಸಂಪಿಗೆ ಮರದಡಿಯೊಳ್ ಕುಳಿತು
ಕೊರಳ್ ತಬ್ಬಿ ಕಂಬನಿ ಮಿಡಿದರೇಸೋ ಪೊಳ್ತು ಮೂಕ
ಮೌನದಲಿ. ಮತ್ತಂ ಸುಮಿತ್ರೆ ತನ್ನಂ ತಾನೆ ಸೈಪಿ,
"ಶುಭೆ! ಇನ್ನು ಒತ್ತಾಯಿಸದಿರ್. ವಿಧಿಲಿಖಿತಮೆಂತಿಹುದೊ
ಅಂತಿರ್ಪುದೀ ಜೀವನಂ. ಇಲ್ಲದುದಂ ಬಯಸಿದೊಡೆ
ಬಪ್ಪುದೇಂ ಜೀವನೀಯ ಶಾಂತಿ ?" ಎಂದಳ್ ಬೇಸತ್ತು.
"ಅಂದೊಡೆ ನಿನಗಿಲ್ಲದ ಜೀವನೀಯ ಶಾಂತಿ ಎನಗುಂ
ವರ್ಜ್ಯ ಕಾಣ್. ಇಬ್ಬರ ಹಾದಿ ಎಂದೂ ಒಂದೆ ಇರ್ಕುಂ!"
"ಅಂತೆಸದಿರ್ ಸುಚಿತ್ರೆ ? ನಿನಗೇಕೆ ಎನ್ನ ಸಂಕಷ್ಟ ?

ನೀನಿನ್ನು ಬಾಲೆ; ಎಳೆ ಮುಗುದೆ. ನೂರ್ಕಾಲ ಸೊಗದಿಂದೆ
ಬಾಳಿ ಬದುಕಲಕ್ಕು. ಕುಲದೈವಂ ಕಾಪಿಡಲಿ ನಿನ್ನ–
ನೆಂದು ಏಗಳುಂ ಮನದೊಳ್ ಪ್ರಾರ್ಥಿಸಿಕೊಳ್ಳುವೆ" ಎಂದ
ಸುಮಿತ್ರೆಯ ಕೊರಳಂ ನಳಿದೋಳಿಂ ಬಳಸಿ ಬಿಕ್ಕಳುತ
ನುಡಿದಳ್ ಸುಚಿತ್ರೆ "ತೆಗೆ, ನಿನಗಿರದ ಸೌಭಾಗ್ಯಮೆನಗೆ
ಬೇಡವೇ ಬೇಡ. ಎನ್ನ ನಾಟಕ–ವಿದ್ಯೆ–ಬುದ್ಧಿಗಳ
ಆಸೆ–ಆಕಾಂಕ್ಷೆ ಅಳಿಯಿತಿಂದಿಗೆ. ಈವೊಂದು ಉಗ್ರ
ಕಟ್ಟಂಕೆಯಾ ಬಾಳ್ಕೆ ಆರಿಗೂ ಸಲ್ಲ. ಈರ್ವರುಂ
ಈಗಳೆ ಕೆರೆಗೆ ಬಿದ್ದು ಸಗ್ಗ ಸಿರಿ ಪಥಂ ಪಿಡಿಯುವಾ !
ಅಲ್ಲಿಮಗೆ ಅಂಕೆ ಸಂಕೆಗಳ ಗೋಜನಿತಿಲ್ಲ ! ಮೇಣ್
ಸ್ವಾತಂತ್ರ್ಯದ ನೆಲೆ ಎಮಗಿರ್ಕುಂ. ಏಳ್ ಈಗಳೆ ಪೋಗೆ
ನೋಳ್ಪರಿಲ್ಲಂ. ಬೆದರದೆ ಎದ್ದೇಳ್." ಎನಲಾ ತಂಗಿ
ತೆಕ್ಕನೆದ್ದ ಸುಮಿತ್ರೆ ಅವಳೊಡಂ ಹರುಷದಿಂದಲೇ
ನಡೆದಳ್ ಕೆರೆಯಂಗಣಕೆ. ಥಳಥಳಿಪ ಸುನೀಲ ವಾರಿ
"ಬಾ ಬಾರೆ. ಬಾರೆನ್ನ ಚಿನ್ನಗಳಿರಾ ! ಎನ್ನ ಮಡಿಲ
ಸುಪ್ಪತ್ತಿಗೆಗೆ ಶಂಕೆಯಂ ಬಿಟ್ಟು ! ಎಂದು ಕರೆಯುತಿರೆ
ಈರ್ವರುಂ ಜಲದಂಚಿಗೆತ್ತು ಒಬ್ಬರನ್ನೊಬ್ಬರ್ ಬಿಗಿ
ವಿಡಿದು ಕೊನೆಯ ಬಾರಿ ನಸುನಗೆಯಂ ಸೂಸಿ ಕೈಮುಗಿದು
ಜಲದೇವಿ ನಮೋನ್ನಮಃ ಎನುತುರುಳಿದರಾ ನೀಲ
ಜಲಕೆ ಭೂಭಾರಮಂ ಕಳೆಯಲೆಂದು ಈ ಭವತೊರೆದು !

ಇಂತಪ್ಪ ಜೀವನ ನದಿ ಭಾರತ ಧಾತ್ರಿಯಲಿ ನಿಚ್ಚ
ಪರಿಯುತಿರ್ಪುದು ಬುದ್ಧಿ ಜೀವಿಗಳ ಕಣ್ಮುಂದೆ ಮೇಣ್
ಆಳ್ವವರ ಅಧಿಕಾರದ ಶಂಕರ ಶಕ್ತಿ ಕೋಂಟೆಯೊಳ್ !
ಇದೊಂದು ಕೊನೆವರಿಯದ ಕಡು ಸಂಕಟದ ವೈತರಣಿ !
ಸಾಮಾಜಿಕ ಪಿತೃವರ್ಗ ಕಣ್ಣಿದ್ದು ಕುರುಡರಿರಲ್ಕೆ →

ಕುರುಬ ಕುರಿಗಳಂ ಸಂಪೋಷಿಸುವೊಲ್ ನಡೆದಿದೆ ನೋಡ !
ಜೀವನೀಯಾತ್ರೆ ಕಂಬನಿಯ ಕಡಲ ಕೋಡಿಯಂ ಹರಿಸಿ !
ಯಜಮಾನಷಾಹಿ ಅಳವಡಿಸಿರ್ದ ಶಾಸ್ತ್ರಸೂತ್ರಗಳ
ಶೃಂಖಲಾಬದ್ಧ ಜೀವನ ಮುಗ್ಧದುಗ್ಧ ಮಾನಿನಿಗೆ !

ಓವೊ ! ಸಕಲ ನಾರೀಜನಂ ಅಂದಿಂದಿಗೂ ಕಲಿತು
ಬಲಿತು ಒಳಗಣ್ ತೆರೆದೊಡಂ ಹೊರಜಗತ್ತಿನ ಸಂಸರ್ಗ
ಪಡೆದೊಡಂ ಅಚಿಂತ್ಯರಿರೆ ನೀನೇಂಗೈವೆ ಪರಶಿವನೇ ?
ಇದೆಮ್ಮಯ ಜನ್ಮ ಜನ್ಮಾಂತರಗಳ ಕುಕರ್ಮ ಕಾಣೊ !



# ಪಂಡಿತ್ ರಮಾಬಾಯಿ

(ಆಧಾರಿತ)

ಅತಿ ಕಠಿಣಮಪ್ಪ ಪಾಶಾಣಮಯ ಹೃದಯಂ
ಬಿಸಿಲಟ್ಟಿದ ಬೆಣ್ಣೆಯೊಲ್ ಕರಂಗಿ ನೀರಾಗಿ
ಹರಿಯುವನಿತು ಕರುಣಾಯಿತ ಸತ್ಯ ಚಿತ್ರಾರಂ
ಬಡ ಭಾರತದ ಬೆನ್ನಿನ ಕೀಲ್ಗಳ್ ತಪ್ಪಿದೊಲ್
ಮಹಾ ಜೀವನೀವಾಹಿಯ ತರಂಗರಂಗಂ.

ಸಾವಿರದೆಂಟನೂರ್ರೈವತ್ತರ ಸಾಮಾನ್ಯ
ಜನ ಜೀವನಂ ಸದಾ ನರಕಮಯಮೆನೆ ಸಾಲ್ಗುಂ !
ರಾಜ್ಯದೆಲ್ಲೆಡೆಯುಂ ವಿದ್ಯಾದಾರಿದ್ರ್ಯ, ಜ್ಞಾನ
ದಾರಿದ್ರ್ಯ, ವಿಜ್ಞಾನ ದಾರಿದ್ರ್ಯ, ಕಾರುಣ್ಯ
ದಾರಿದ್ರ್ಯಗಳಿಂ ನರಳೀನರಳಿ ಜನಜಂಗುಳಿ
ಸಾಯುತಿತ್ತು, ವ್ಯರ್ಥ ಜೀವನದಿ ಕ್ರಿಮಿಗಳವೊಲ್ !
ವಿದ್ಯೆ ಏಗಳುಂ ವಿದ್ವನ್ಮಣಿಗಳ ಸಂಪತ್ತು !
ಇತರರ್ಗೆ ಮನಬಿಚ್ಚಿ ಕಲಿಪುವವರ್ ವಿರಳಂ,
ಎನಲ್ಕಾ ಸರಸತಿಯ ವರ ಪ್ರಸಾದಂ ಪುಣ್ಯ
ಪುರುಷರ್ಗೆ ಮೀಸಲ್ ! ಇಂ ಮುಸುರೆಯುಜ್ಜುವ ಪೆಣ್
ಕಲಿವುದೇಂ ಫಲಂ ? ಎಂಬ ಹೇಯ ತಿರಸ್ಕಾರಂ !
ಪೆಂಗಳೆಗೆ ದಿನ ನಿತ್ಯ ಭಂಗಗಳ ಸಖ್ಯ,
ಕಣ್ಣೀರಿನ ಬಾಳು ಕಣ್ಬೆಳಕು ನಂದುವನಕಂ !

ವೇದಕಾಲದಿಂ ಭಾರತವರ್ಷ ಪುಣ್ಯತಲ !
ಸಂಯಾತ್ರಾ ಕ್ಷೇತ್ರಂ ! ಕಸ್ತೂರಿ ಪರಿಮಳ ತಂ–
ತಾನೇ ಪಸರಿಸುವೊಲ್ ವೇದ ಪರಿಮಳಂ ಮೇಣ್
ಸಂಸ್ಕೃತಿ ಪರಿಮಳಂ ವಿದೇಶ ವಿಖ್ಯಾತಿ !
ಸುಜಲಾಂ ಸುಫಲಾಂ ಮಲಯಜ ಶೀತಲಾಂ
ಎಂತಪ್ಪ ನಲ್ ಬಣ್ಣನೆ ಎನಿತು ಸುರಮ್ಯಮಿಾ →

ನುಡಿಗಟ್ಟು ಆದೊಡೇಂ ಜೀವನೀವಾಹಿನಿಯು
ಭಂಗ ಬನ್ನಗಳ ನೋಡ ! ಕಣ್ಣೀರ ಕಡಲಿನಾ
ಆಳವಂ ಮುಳುಮುಳುಗಿ ನೀ ಆಪನಿತು ನೋಡ !
ದೂರ ಬೆಟ್ಟ ದಿಟ್ಟಿಗೆ ಸುರಸುಂದರಮಲ್ತೆ ?
ಅಂತೆಯೇ ಮಮ ಜೀವನೀಯಪ್ಪರ ದೂರವೆಟ್ಟ
ಸುಂದರಂ ! ಪಕ್ಷಿಕೂಜನ ಸುಂದರಂ ! ಪವಿತ್ರ
ಗಂಗಾಸಲಿಲ ಸುಂದರಂ ! ಸಕಲಂ ಸುಂದರಂ !!

ಶ್ರೀ ಅನಂತಶಾಸ್ತ್ರೀ ಡೋಂಗರೇ ಎಂದೆಂಬ
ಬ್ರಾಹ್ಮಣಂ ಘನ ವಿದ್ವಾಂಸನಿರ್ದಂ ; ನಮ್ಮಯ
ರಾಜ್ಯದ ಮಂಗಳೂರು ಪ್ರಾಂತದಲಿ. ಶ್ರೀಯುತ
ಶಾಸ್ತ್ರಿ ಇಂತಪ್ಪ ಬಾಳಿನಿಂ ಬೇಸತ್ತು ಬಲು
ನೊಂದು ಇನ್ನಾದೊಡಂ ಸ್ತ್ರೀಜನ ಶಿಕ್ಷಣಂ
ಒಳ್ಳಿತೆಂದು ಪ್ರಚಾರಗೊಳಿಸಲ್ ಮುಂದಾಗೆ
ಸಾಮಾಜಿಕರ್ ಸುಮ್ಮನಿರ್ಪರೇಂ ? ಸಿಡಿದೆದ್ದು
ಹೂಂಕರಿಸಿ ಮಾಂಕರಿಸಿ ಬದ್ಧವೈರಿಗಳಾಗೆ
ಶಾಸ್ತ್ರಿವರ್ಯ ನೊಂದು ನೀರಾಗಿ ಬೇರೊಂದು
ದಾರಿಕಾಣದಾಗೆ ಜನಸಂಗರದಿಂ ದೂರ
ದೂರ ವಾಸಿಸುವ ಸಂಯೋಜನೆಯಲಿ ದೂರದ
"ಗಂಗಾಮೂಲಾ" ಎಂಬ ಸುಂದರ ವನಸ್ಥಲಿಗೆ
ತೆರಳಿ ಅಲ್ಲಿಯೆ ಪರ್ಣಕುಟಿಯಂ ನಿರ್ಮಿಸಿ ತನ್ನ
ಸಂಸಾರದೊಡಂ ವಾಸಿಸುತ ಕಟು ಸಮಾಜಂ
ದೂರೀಕರಿಸಿದಂ !

ಅಹಃ ತಣ್ಣನೆ ತನಿವೊರೆವ
ವನಸ್ಥಲಿ ಪಕ್ಷಿಗಳ ಕೂಜನದ ರವಮಧುರಂ
ಕಾಜಾಣ, ಕಾಮುಳ್ಳಿಗಳ ಕಂಠಸ್ವರದಿಂ
ಪೊಣ್ಮೆ ರಾಗಾಲಾಪನೆ ಸ್ವರ್ಗ ಸುಧಾ ಸೂತಿ →

ಕಣಾ ! ಇಂತಪ್ಪ ಅರಣ್ಯದಾಣಂ ! ಏಗಳುಂ
ಶಾಂತ ಪ್ರಶಾಂತ ವಾತಾವರಣ ಮೋದಕಂ
ಪಚ್ಚನೆಯ ಪಸುರೊಸರ್ವ ಪಸುರ್ಲೋಕದ ಮಧ್ಯೆ !
ಅರಗಿಳಿಯ ಜೀವನಂ ಪೊದಳ್ದ ಕುಟಿಯ ಸುತ್ತ
ಪೂಬೇಲಿಯೆಡೆ ದಿಟ್ಟಿಯಂ ನೆಟ್ಟು ನೋಡುತಿರೆ
ಶಾಸ್ತ್ರೀಮಹೋದಯಂ; ತೇನೆ, ಪಿಕರಾಳ, ಗಿಳಿ,
ಮಿಾಂಚುಳ್ಳಿ ಮುಂತಪ್ಪ ಪಕ್ಷಿಗಳಲಂಕರಣ
ತಾವೆ ಸೃಷ್ಟಿಸಿದವೊಲ್ ಸತ್ಯ ಸುಂದರಮಾ
ದೃಶ್ಯಂ, ವರ ಚಿತ್ರಕಾರನ ಕುಂಚಕೆ ಮುದದಿಂ
ಅಣಿಯಾದಪುದೊ ಎನಲ್ಕೆ ಎನಿತೊಂದು ಸುಂದರ !

ಆದೊಡಂ ಕಾಸುಗಳಿಪ ಕೊರತೆ ಪಿರಿದಲ್ತೇ ?
ಊರ ವಸತಿಯಲಿರ್ದ ಸಮಯಂ ವಟು ಸಂಗರಂ
ಪಾಠಪ್ರವಚನಗಳಿಗೆ ಬರುತಿರ್ದುದರಿಂದೆ
ಕಾಲಹರಣ–ಜೀವನವೆಚ್ಚವೆರಡುಂಗೂಡಿ
ಮೈಮನಂ ಪುರುಪಿನಿಂ ಕೂಡಿರ್ದುದು. ಈಯೊಂದು
ನಿರ್ಜನ–ನಿಸ್ಸಂಗ ತಾಣಂ ಜೀವನ ಮಾರ್ಗಕೆ
ಕಠಿಣಮಾದೊಡಂ ದಿನದಿನಂ ಕಾಲ್ನಡಿಗೆಯಲಿ
ಪೋಗಿ ಪಾಠಪ್ರವಚನಮಂ ಕೈಗೊಳ್ಳುತಿರ್ದಂ.
ಅಂತುಮಲ್ಲದೆಯುಂ ಸಾಧು ಸಂತರ್, ವಿದ್ವಾಂಸ
ವೀಭೂತಿಗಳ್ ಏಗಳು ನೆರೆಯುತಿರ್ದುದರಿಂ
ಅತಿಥಿ ಸತ್ಕಾರದೊಳ್ ದಂಪತಿಗಳೊಗ್ಗೂಡಿ
ದುಡಿದ ಫಲವೆನೆ ಧನದ ಥೈಲಿ ಕರಗುತಿರಲಾ
ಶಾಸ್ತ್ರಿ ಕಡು ಸಂಕಟದಲಿ ಸಿಲುಕಿದುದರಿಂದೆ
ನಿಚ್ಚ ಹೆಚ್ಚು ಹೆಚ್ಚು ದುಡಿಯ ಹತ್ತಿದಂ. ಮಡದಿ
ಲಕ್ಷ್ಮೀಬಾಯಿ ಆದರ್ಶಸತಿ! ಪರಮ ಸಾಧ್ವಿ !
ವಿದ್ಯೆಯುಂ ಪುರುಷವರ್ಗದ ಸ್ವಾಮ್ಯದೊಳಿರ್ದಾ →

ಕಾಲದೊಳ್ ಲಕ್ಷ್ಮೀಬಾಯಿ ಪತಿಯ ಸಹವಾಸದಿ
ಅಕ್ಷರಾಭ್ಯಾಸಮಾಡಿ ಅಲ್ಪಸ್ವಲ್ಪ ವಿದ್ಯಾ
ದೇವತೆಯ ಪ್ರಸಾದಂ ಪಡೆದುಕೊಳೆ ಅತ್ಯಪೂರ್ವ
ವಿದ್ಯಾವತಿ ಎನಿಸಿಕೊಂಡಳ್ ತಾನೆ ತಾನ್ಯೆಸಿ !

ಇಂತಪ್ಪ ಸಮಯೆ ಲಕ್ಷ್ಮೀಬಾಯಿಯ ಪ್ರಥಮ
ಪುತ್ರಿಯೆನೆ ಸಂಜನಿಸಿದ ಸುಂದರ ಶಿಶುರತ್ನ
'ರಮಾಬಾಯಿ' ಎಂದೆಂಬ ನಾಮಧೇಯ ಪಡೆದಳ್.
ಶಿಶು ದಿನದಿನಂ ಬೆಳೆಯುತಿರೆ ಮೂರು ಸಂವತ್ಸರ
ಎಂತು ಕಳೆದುದೋ ಎನಲ್ಕೆ ಕಾಲಂ ನೀರಿನೊಲ್
ಪರಿದೋಡಿದುದು ಸರಾಗದಿ. ಬಾಲಚಂದ್ರನೊಲ್
ಶಿಶುರತ್ನ ಬೆಳೆದಳೆಲ್ಲರ ಕಣ್ಮಣಿ ತಾನಾಗಿ !

ಯಾವತ್ತೂ ಸಾಧು ಸಂತರ ಮೇಣ್ ವಿದ್ವಾಂಸ
ಮಹನೀಯರ ಸಹವಾಸದಿಂ ಮುದ್ದು ಮಗುವಿನ
ಜ್ಞಾನ ಚಕ್ಷು ತೆರೆದುದು ಸುಜ್ಞಾನ ದೃಷ್ಟಿಯಿಂ !
ಬಾಲ್ಯದೊಳ್ ತಾಯ್ತಂದೆಯರಿಂ ಮನೆಯೊಳೆ ಪಾಠ
ದೊರೆಯೆ ಶಿಶುರತ್ನ ಪುಟವಿಟ್ಟ ಮಿಸುನಿಯಾದಳ್!
ಇಂತು, ದ್ವಾದಶ ವರುಷದ ಹೊಸ್ತಿಲು ದಾಂಟುವಾ
ಸಮಯದೊಳ್ ಬಾಲಕೋಮಲೆಗಿಪ್ಪತ್ತು ಸಾವಿರ
ಶ್ಲೋಕಗಳುಂ ಕಂಠಪಾಠ ಮಾಗಿರ್ದುದೆನೆ
ಏನಾಶ್ಚರ್ಯಂ ! ಏಂ ಘನ ಪಾಂಡಿತ್ಯಮಾ ಚಿಣ್ಣ
ಬಾಲೆಗೆ ! ಅಹ, ಸದ್ವಂಶದುಂಬಳಿಯೊ ಮೇಣಾವ
ದೇವಾಂಶ ಚೋದನೆಯೊ ಅಂತುಮಿಂತು ಬಾಲೆಯ
ದೂರ ಭವಿಷ್ಯದ ಘನತೆ ಮೊಳಕೆಯೊಳೆ ಕಂಡುದುದು
ಎಲ್ಲರಂ ಅಚ್ಚರಿಬಡಿಸುವೊಲ್ !

ಅನಿತರೊಳ್
ಮಡದಿ ಲಕ್ಷ್ಮೀಬಾಯಿ ಇನ್ನೆರಡು ಮಕ್ಕಳಿಗೆ →

ಜನ್ಮವಿತ್ತು ಮೂವರು ನಲ್ಮಕ್ಕಳ ತಾಯಾದಳ್ !
ಶಾಸ್ತ್ರಿದಂಪತಿಗಳ ಮನೆಯಂಗಣದಿ ಗುಲಾಬಿ,
ಮಂದಾರ, ಮೊಲ್ಲೆ, ಜಾಜಿ, ಪೂಜೆಳಸು ಮತ್ತಂ
ರಾಗಿ, ಜೋಳ, ಕಬ್ಬುಗಳ ಕಿರುದೋಟಂ ಕುಟಿಯ
ಬಳಿ ಕಣ್ಗೆಡ್ಡವಾಗಿರ್ದುದು ಜೀವನೋಚಿತವಾಗಿ;
ಸ್ವತಃ ಕರ್ಮಕುಶಲಿಗಳಾದ ಸಂಸಾರ ಇನಿತು
ಬಿಡುವಿಲ್ಲದೊಲ್ ದುಡಿಯುತಿರ್ದುದು ಬಿಮರಿಳಿಸಿ.
ರಮಾಬಾಯಿ ಪೂಗಿಡಗಳಿಗೆ ನೀರೆರೆದು ನಲ್
ಪೋಷಿಸಿ ಪೂಗಳಿಂ ಇಷ್ಟದೇವತೆಯಂ ಪೂಜಿಸಿ
ನಮಿಪಳ್; ಸಹಜಾತರೊಡನೆ ಆಡಿ ನಲಿದಾಡಿ
ಪಾಲಿಪಳ್; ತಾಯಿತಂದೆಗೆ ನೆರಂ ನೀಡುವಳ್ ;
ಎಡೆಯಿಂದೆಡೆಗೆ ಚಿಟ್ಟೆಯೊಲ್ ಪಾರಾಡುವಾ
ಪುತ್ರಿ ಎಲ್ಲರ ಅಚ್ಚುಮೆಚ್ಚಿನ ಪುತ್ಥಳಿ ಕಣ !

ಇಂತೊಂದು ಸಂಜೀವನಂ ಬಹುಕಾಲ ನಡೆವುದೇಂ
ಪೇಳ್ ! ಗಂಡಾಂತರವಿರದ ಬಾಳ್ ಬಂದಪುದೆ
ಲೋಕದ ಬೆಳಕಿಗೆ ? ಎಂತಪ್ಪ ಭಂಗ ಬವಣೆಯೊ
ಅಂತಪ್ಪ ಮೂಸೆಯೊಳ್ ಬೇಯುವುದರಿಂದಲ್ತೇ
ಲೋಕಜ್ಞಾನಂ ! ಮೇಣ್ ಆತ್ಮಜ್ಞಾನಂ ತಿಳಿಯ !

ಇಂತಿರ್ಪೊಡೆ ಆವಾವ ದುಷ್ಟಗ್ರಹಂಗಳ
ಚೋದನೆಯೊ ಮೇಣಾವ ದೇವತೆಯ ಆಗ್ರಹವೊ,
ಸಾವಿರದೆಂಟನೂರೆಪ್ಪತ್ತಾರರಲಿ ಭೋಂಕನೆ
ಬಂದೆರಗಿದ ಭೀಕರ ಬರಗಾಲವನೇವೇಳ್ವೆಂ ?
ಮಳೆಬೆಳೆಗಳ್ ನಶಿಸಿ ಚಂಡ ಪ್ರಚಂಡತರ
ದಾರಿದ್ರ್ಯ ದೇವತೆಯು ವಿಕರಾಳ ತಾಂಡವೀ
ನೃತ್ಯಗೈಯ್ಯುತಿರಲ್ ಪೇಳಲೇಂ ಪ್ರಚಂಡ
ದಿನಮಾನಗಳ ರೌದ್ರಾವೇಶಂ ! ಕುಡಿವೆನೆನಲ್ →

ನೀರಿಲ್ಲ; ಕಾಳಿಲ್ಲಂ; ಕೂಳಿಲ್ಲಂ. ದಿನ ದಿನಂ
ಪಸಿವು ಬಾಯಾರಿಕೆಗಳಿಂ ಬಳಲಿ ಎಲ್ಲೆಡೆಯು
ಜನದನಗಳ್ ಕ್ರಿಮಿಗಳವೊಲ್ ತೆತ್ತರ್ ಪ್ರಾಣಂ!
ಗುಬ್ಬಿ ನೆಲ ಮುಟ್ಟುವೊಲ್ ತಗ್ಗಿ ಪಾರಾಡಿದೊಡೆ
ನೋನೋಡಿ "ಇದಂ ಮಳೆ ತರುವ ಕುರುಹು!" ಎನುವರ್.
ಮೇಣ್ ಕಪ್ಪೆ "ವಟಗುಟ್ಟಿದೊಡದು ಮಳೆತರ್ಪಾ
ಸೂಚನೆ!" ಎಂಬರ್ ಬೆಳರ್ತು ಬೆಂಡಾಗಿ ತೇಲುವ
ಬೆಳ್ಮೋಡಗಳಂ ನೋಡುತ! 'ಜೀರ್ದುಂಬಿ ಜೀಯ್ಯನೆ
ಜೀರಿದೊಡೆ ಮಳೆ ಖಂಡಿತ!' ಎಂಬರು ಮಡಿವಂತಿಕೆಯ
ಮೂಢ ಜನ! ಜೀರ್ದುಂಬಿ ಜೀರ್ದೊಡಂ, ಗುಬ್ಬಿ ನೆಲ
ಮುಟ್ಟಪಾರ್ದೊಡಂ, ಕಪ್ಪೆ ಕೂಗಿದೊಡಂ ಮಳೆಯ
ಸೂಚನೆಯೆಲ್ಲು ಕಂಡುಬಂದುದಿಲ್ಲಂ! ಸುಟ್ಟುರಿವ
ಸುಡುಬಿಸಿಲ ಕಾವಲ್ಲದೆ ಬೇರಿಲ್ಲಂ! ಪ್ರಾಣಿ
ಪಕ್ಷಿ ಕ್ರಿಮಿಕೀಟಗಳಿಗೂ ಉಳಿಗಾಲವಿಲ್ಲದ
ಗೋಳು! ಎಲ್ಲಿಯೋ ಸಂಸ್ಕಾರ ಕಾಣದ ಪೆಣಗಳ
ದುರ್ನಾತ ಜೀವವಂ ತಲ್ಲಣಿಸುವಂಥ ಗೋಳು!
ಪ್ರಾಣಿಪಕ್ಷಿಗಳ್ ದಿಶೆದಿಶೆಗೆತ್ತು ನಿಶ್ಯಬ್ದ
ನೀರವತೆಯ ರುದ್ರ ಭಯಾನಕ ದಿನಗಳ್ ಬರೆ
ನುಂಗಿ ನೊಣೆಯುವವೊಲ್! ಹೃದಯಂ ಬಿರಿಯದೆ?
ಒಡಲ್ ಸಂಕಟಂ ಪೆರ್ಚಿದೊಡಂ ತೊಳಲಿ ಅಳಲ್
ಕಣ್ಣಾಲಿಗಳಲಿ ಕಂಬನಿಯಿರ್ದುದಿಲ್ಲಂ! ಹಾ!
ಕಷ್ಟಂ! ಕಡುಕಷ್ಟಂ! ಬರಗಾಲ ಪರಿಸ್ಥಿತಿ!
ಘೋರ ಘೋರವಮಾ ಜೀವನ ಕಾನನದ ಕಾಳ್ಗಿಚ್ಚು!

ಅಂತಪ್ಪ ದುರ್ದಿನಗಳಲಿ ಶಾಸ್ತ್ರಿ ಮರಣಿಸಲ್
ಪತಿ ಪಾರಾಯಣೆಯಾದ ಸತಿ ಕೊರಗಿ ಕರಗಿ ಬಲು
ದುಃಖದಿಂ ಸಲುಗಿ ಪತಿಯ ಪಥವಿಡಿದು ಅಸುವಂ →

ಸೀಗಿದಳ್ ಮಕ್ಕಳಂ ಹಾದಿಯೊಳ್ ಕೈವಿಟ್ಟು !
ಹರಿಹರೆಯದ ತರಳೆ ರಮಾಬಾಯಿ ಕಂಗೆಟ್ಟು
ಮುಂದೇನೆಂಬ ಚಿಂತೆಯೊಳ್ ಕಂಬನಿಗರೆದೊಡಂ
ಧೃತಿಗೆಡದೆ ಸಹಜಾತರನಪ್ಪಿ ದಿಟ್ಟೆಯಂ
ನಭಾಂಗಣದ ದೂರದೂರ ಸೀಮಾ ಕ್ಷೇತ್ರದ
ಧೂಮಮಾಲೆಯಂಚಲ ಹೊನ್ನದೆರೆಯಂ ನೋಡು
ತಿರೆಯಿರೆ ಮುಗುದೆ, ಮೋಡದಂಚಿನಲಿ ಕಣ್ಗೆಸೆವ
ರವಿಕಿರಣಗಳ್ ನೆಯ್ದ ಹೊನ್ನಿನ ದೇವಿಯೊಲ್
ಮೈವೆತ್ತು ಅಭಯಹಸ್ತ ತೋರಿದೊಲ್ ಕಂಡುಬರೆ
ಹದಿಹರೆಯದ ರಮಣಿ ಪುಳಕಿತಳಾದಳ್ ತನ್ನ
ಬಾಳ್‌ದೋಣಿಯ ಚುಕ್ಕಾಣಿ ತಾನೆಪಿಡಿವೆನೆಂದು !
ಅಂದಿನ ಆ ರಣಗೋಳಂ ರಮಾಬಾಯಿ ತನ್ನಯ
ಲೆಕ್ಕಣಿಕೆಯಲಿ ಇಂತು ಲೇಖಿಸಿದಳ್ "ಬಂಧುಗಳ್
ಕಡೆಗಣಿಸಿ ಅಟ್ಟಿದರ್, ಉಂಡು ಪೋದವರೆಲ್ಲೊ ;
ನಾವೆಲ್ಲೊ. ತಬ್ಬಲಿಗಳೆಂದು ಕರುಣಿಸಿದರೇ ?
ಹಟ್ಟಿಯಲಿ ಮಲಗೆಂದರೇ ? ಹಾ ! ಭೂಗಗನಗಳೆ
ನಮ್ಮನೆಲೆ ! ಮೇಣ್ ಬಂಧು ಬಳಗಂ ! ಎಲ್ಲಿಯುಂ
ತಿಂಬುವೆನೆನೆ ಪಚ್ಚನೆ ಪಸಿರ್, ಕಾಯಿಕಡ್ಡಿಗಳ್,
ಗೆಡ್ಡೆಗೆಣಸುಗಳ್ ಕಂಡೆವಿಲ್ಲಂ ! ಇನ್ನೆಲ್ಲಿ
ಎಮಗುಣಿಸು ? ಉಳ್ಳವರ್ ತಿಂದೆಸೆದ ಸಿಪ್ಪೆಗಳ್
ಕಾಡುಬೀಜ, ದುರುಗೆಲೆಗಳ್ ಮುಂತಪ್ಪ ಹಾಳು
ಮೂಳುಗಳ್ ಜೀವನಾಧಾರಂ ! ಆ ದುರ್ದಿನದ
ಆ ಘೋರ ಸಂಕಟದಿಂ ಎಂತು ಪಾರಾದೆವೋ
ದೇವರೇ ಬಲ್ಲಂ ! ಚಳಿದಿನಗಳಲಿ ಗುಳಿಯಲಿ
ಕುಳ್ಳಿರ್ದು ಮರಳ್ ರಾಶಿಯಲಿ ಮೈಮುಚ್ಚಿ ಉಳಿದ
ದಾರುಣದೆಶೆಯಂ ಏನೆಂದು ಬಣ್ಣಿಸಲಿ ? ಹಾ

ಅದೊಂದು ನೆನೆಯಲಾರದ ದುರ್ಭರ ಪ್ರಸಂಗಂ !"
ಗಿಡುಬಳ್ಳಿಮರಗಳ್ ಒಣಗಿ ಬಣಬಣವೆನುತಿರೆ
ಕುಟಿಯಂ ತೊರೆದು ಚಿಣ್ಣರೊಡನೆ ಪೊರಮಂಟಳಾ
ಧೀರ ಧೀಶಕ್ತಿಯು ರಮಾಬಾಯಿ ಪತ್ತಣಕೆ.
ಪಿತನ ಮಾಳ್ಕೆಯೊಳ್ ಪಾಠ ಪ್ರವಚನಗಳಂ ಪೇಳಿ
ಜೀವನೋಚಿತಮಾಗಿ ಊರಿಂದೂರುಗಳಿಂಗೆ
ಕಾಲ್ನಡಿಗೆಯೊಳೆ ಪೋಗಿ ಗಳಿಕೆ ಕಲಿಕೆಮೆರಡಂ
ಮುಂದರಿಸಿ ಸಂಪೋಷಕಿಯಾದಳ್ ಸೋದರೀ
ಸೋದರಂಗೆ ! ಬಳಲಿ ಅಶಕ್ತೆಯಾದೊಡಂ ಆ
ನಿಚ್ಚ ಕಾರ್ಯಕ್ರಮಂ ಕುಂದದೆ ನಡೆದುದೆಲ್ಲೆಡೆ !

ಈ ಪ್ರಕಾರಂ ಮೂರು ವರ್ಷಮಾನಂ ಉರುಳಿ
ಸಾವಿರಾರು ಮೈಲಿ ಯಾತ್ರೆ ನಡೆಸಿದಳ್ ಅಲೆ
ಮಾರಿಗಳ ತೆರಂ ! ಪೆಣ್ಮಣಿಗೆ ಎಂತಪ್ಪ ಘನ
ಘೋರಮಾ ಆ ಜೀವನಂ !
ಎಲ್ಲಿಯುಂ ಕರುಣೆ
ದೊರೆಲಿಲ್ಲಮೆನೆ ಈ ಊರೇಂ ? ಆ ಊರೇಂ ?
ಅಂತುಮಿಂತು ನಡೆದೂನಡೆದೂ ರಮಾಬಾಯಿ
ಕಲಿಕತ್ತೆಯಂ ತಲುಪಿದಳ್ ! ತನ್ನ ನತದೃಷ್ಟ
ಸಹಪಾಠಿಗರಿಂಗಾಗಿ ಇಡೀ ಜೀವನವಂ ಮುಡಿಪು
ಇಡುವೊಂದೆ ಪೂಣ್ಕೆಯಲಿ ಪಣಕಟ್ಟಿ. ಅಲ್ಲಲ್ಲಿ
ಸಂಘಸಂಸ್ಥೆಗಳ ವೇದಿಕೆಯೇರಿ–ವಿಧವೆಯರ
ಕರುಣಾಜನಕ ಸ್ಥಿತಿ–ಬಾಲ್ಯವಿವಾಹ–ಶಾಸ್ತ್ರ
ಸೂತ್ರಗಳ ಸಂಕೋಲೆ–ವೈಯಕ್ತಿಕ ಸ್ವಾತಂತ್ರ್ಯ
ಮುಂತಪ್ಪ ಸ್ತ್ರೀವರ್ಗಕ್ಕಿರುವ ಸಂಕಷ್ಟಗಳಂ
ಮುಂದಿಟ್ಟು ಅನೇಕಾನೇಕ ಶಾಸ್ತ್ರಂಗಳಾ
ಪ್ರಮಾಣಗಳಂ ತಿಳಿಪಿ, ಎಳೆಎಳೆಯುನೆ ಬಿಂಗಡಿಸಿ →

ತನ್ನ ಅಭಿಪ್ರಾಯಗಳಂ ಪರಿಪುಷ್ಟಿಗೊಳಿಸುತಿರೆ
ಆ ಸಂಸ್ಕೃತ ವಾಙ್ಮಯಂ ಸ್ವತಃ ಶಾರದಾದೇವಿ
ಇಂದಲೇ ಇಳಿತಂದುದೊ ಎನಲ್ಕೆ ಅದ್ಭುತಮಾ
ಘನ ಪಾಂಡಿತ್ಯಂ ! ಆಗಳೆ ಲಭಿಸಿದುದು "ಪಂಡಿತ್"
ಎಂಬ ಅಗ್ರಮಾನ್ಯ ಬಿರುದು ಪ್ರೇಮಾದರದಿಂ !
ಇಪ್ಪತ್ತೆರಡರ ಪ್ರಾಯದ ವಿದ್ಯಾರಾಣಿ ಬಲ
ಹೀನ ಕನ್ಯೆ ಎಳೆಯ ಹುಡುಗಿಯೊಲ್ ಕಣ್ಗೆಸೆದಿರೆ
ಬಾಯೊಳ್ ಬೆರಳಿಡುತಿರ್ದರ್ ಜನಂ !
ಬೆಳ್ದಾವರೆಯ
ಮೈಬಣ್ಣ, ಊದಾವರ್ಣದ ಕಂಗಳ್ ಅನುಪಮ
ಸುಂದರಿಗೆ ಉಪಮಾನವಾಗುತಿರ್ದುವೆನೆ
ಪೇಳಲೇನಾ ಜನ್ಮಯೋಗಂ ! ಸಾಗರತಡಿಯ
ಸಮ್ಮೋಹನೀಯ ವಾತಾವರಣಂ ಮತ್ತಮಾ
ಪಸುರೊಸರ್ವ ವನಸ್ಥಲಿಯ ಸಮೃದ್ಧಮಾದಾ
ತಣ್ಪು–ಇಂಪುಗಳ್ ಒಗ್ಗೂಡಿ ಮೈಗೂಡಿಸಿದ
ಸೌಂದರ್ಯ ನಿಧಿಯೊ ಮೇಣ್ ಸೃಷ್ಟಿಬ್ರಹ್ಮನಾ
ಔದಾರ್ಯಮೊ ಎನಲ್ಕೆ ಸುರ ಸೌಂದರ್ಯದ ನಿಧಿ
ಎನಿಸಿರ್ದಳ್ಳೆ ಧೀರ ಸುಪುತ್ರಿ ರಮಾಬಾಯಿ !
ಕಲಿಕತ್ತೆಯೊಳ್ ನೆಲೆನಿಂದು ದಲಿತ ಸ್ತ್ರೀಯರ
ಜೀವನಂ ಉದ್ಧರಿಪ ಯೋಜನೆಯಂ ರೂಪಿಸಿ
ಸಂಘಗಳ ಮುಖೇನ ಕಾರ್ಯತತ್ಪರಳಾದಳ್ !
ಎಡೆವಿಡದ ಕಾರ್ಯಕ್ರಮದಿಂದೆ ಜನಸಾಂದ್ರತೆ
ಮೆಚ್ಚಿನೆಚ್ಚಿ ಸಂತುಷ್ಟಿಯಿಂ ಪೂಜಿಸುವನಿತು
ಜನಪ್ರಿಯತೆ ಕೂಡಿಬರುತಿರಲಾ ವಿಧಿ ಸಹಿಸದೆ
ಪಾಶವೊಗೆದು ಎಲ್ಲೆಡೆಯುಂ ಕಾಲರಾ ಮಾರಿ
ರೋಗವಂ ಹರಡಿದಂ ! ಆಗಳಾ ಮೃತ್ಯುವಿನ



ಆವೇಶವನೇನೆಂಬೆ ? ಮನೆಮನೆಗಳಿಂ ಪ್ರಾಣ
ಹರಣಗೈಯುತಿರೆ ದುರದೃಷ್ಟವಶದಿಂದಲಿ
ರಮಾಬಾಯಿಯ ಈರ್ವರು ಸಹಜಾತರುಂ ಆ
ಮಾರಿಬೇನೆಗೆ ತುತ್ತೆನೆ ಲಬಲಿಬಿ ಒದ್ದಾಡಿ
ಪ್ರಾಣಮಂ ತೆತ್ತರ್ ನಡುದಾರಿಯಲಿ ಅಕ್ಕನಂ
ಕೈವಿಟ್ಟು ! ಅದುವರೆಗಿನ ಸಂಕಷ್ಟಂ ನೀರ
ಮೇಲಣ ನೊರೆಗುಳ್ಳೆಯೊಲಾಗಲಾ ಕಡು ದುಃಖಿ
ರಮಾಬಾಯಿ ಏಕಾಂಗಿಯಾಗಿಯೆ ಸಂಜೀವನ
ಮಾರ್ಗಯೋಗದಲಿ ಮುನ್ನಡೆದಳ್ ಕಲ್ಲುಗಳೂ
ಕರಗುವವೊಲ್ ! "ಕೋಟ್ಯಾನುಕೋಟಿ ಜನ ಬಾಹುಳ್ಯ
ಮಿಪ್ಪಾತಾಣದೊಳ್ ತಾನೇಕಾಂಗಿಯೆಂಬುದಂ
ಒಪ್ಪಲುಂಟೆ ? ಎರ್ದೆಯೊಳ್ ಉಸಿರುಳ್ಳನ್ನೆಬರಂ
ಮುನ್ನುಗ್ಗಿ ಜನಸೇವೆ ಸಲ್ಲಿಸುವೆ" ಎಂದೊಂದು
ದೃಢ ನಿಶ್ಚಯಗೈದೊಡಂ ನರಸಮಾಜ ಕೊಟ್ಟ
ಶಿಕ್ಷೆಗಿಂ ಮಿಗಿಲು ದೈವಂ ಕೊಟ್ಟ ಶಿಕ್ಷೆ ಕಣ !
ಸಹಜಾತರ ದುರ್ಮರಣ ಮನಮಂ ಕರ್ಬುನದ
ಗಾಣದೊಲ್ ಹಿಂಡುತಿರೆ ಮರೆಯಲಕ್ಕುಮೆ ತಾಂ
ಪಡೆದ ದುಃಖಂ ? ಭಂಗ ಬನ್ನದೊಳೆ ಸಲಹಿರ್ದ
ಪ್ರೇಮದ್ರವ್ಯ ಈ ಪರಿ ಕೊನೆಗೊಂಡಿತೇ ಎಂದು
ಕಂಬನಿಗರೆಯುತಿರ್ದಳ್ ಮರೆಯಲಿ. ಆದೊಡಂ
ತಾನಲ್ಲದೆ ತನ್ನ ಸೈಪರಾರ್ ? ಹಾ ! ಒರ್ಮೆ
ಕಣ್ಣೀರ್, ಇನ್ನೊರ್ಮೆ ಸೇವೆಯುಂ ಪ್ರಧಾನಂ !

ಆಗಳಾ ಅಂತರ್ವಾಣಿ ಸಾಂತ್ವನಗೈವವೊಲ್
"ದೈವಮೆ ಪ್ರತಿಕೂಲಮೆನಿಸಲಕ್ಕುಮೆ ? ಆರಾರ್
ಎನಿತೆನಿತು ಪಡೆದು ಬಂದಪರೊ ಅನಿತಲ್ಲದೆಯೆ
ಬೇರೇಂ ಸಲ್ವುದು ಯೋಚಿಸಿ ನೋಡೈ !" ಎನ್ನಲಾ →

ಸಮಯದಲಿ ಮತ್ತೆ ಮತ್ತೆ ಅಮೂಲ್ಯಮಾ
ಅಂತರ್ವಾಣಿಯು ಮೊಳಗು ಕರ್ಣಗಹ್ವರದೋಳ್ !
ಹಾ ! ಎಂದುದು, ಪ್ರಾಣಮಯ ಓಜಸ್ ! ಆ ಗಳಿಗೆ
ಕ್ಷಯಿಸಿ ಪುರಾತನಗೊಳುವನ್ನಂ. ಅನಂತರಂ
ರಮಾಬಾಯಿ ಧೃತಿಗೆಡದೆ ಹೆಣಗಿದಳ್ ತನ್ನ
ಸನ್ಮಾರ್ಗದೊಳೆ ಮುಂದರಿದು; ಆಂತರಿಕ ದುಃಖ
ವಿಚಾರವ ತನ್ನೊಳೆ ಹುದುಗಿ ! ವರ್ಷಮಾನಮುರುಳೆ
ವಿಶ್ವವಿದ್ಯಾನಿಲಯದ ಮೂಸೆಯೊಳ್ ಪುಟವಿಟ್ಟ
ಶೂದ್ರಜಾತಿಯ ವಿಪಿನ ಬಿಹಾರಿ ಮೇಧಾವಿ-ಯಂ
ಪಾಣಿಗ್ರಹಣಗೈದು ಗೃಹಸ್ಥಾಶ್ರಮಮಂ
ಸ್ವೀಕರಿಸೆ ಕುಟುಂಬಿಗರ್ ಮೇಣ್ ಕ್ಷುದ್ರ ಸಮಾಜ
ವಿರೋಧಿಸಿ ಗುಲ್ಲೆಬ್ಬಿಸಿ ತುಚ್ಛೀಕರಿಸಿದರ್ !
ಆದೊಡಂ ರಮಾಬಾಯಿ ಮರುಗದೆ ಲೆಕ್ಕಿಸದೆ
ತನ್ನಯ ಕಾರ್ಯಚತುರತೆಯಂ ಮುಂಬೆಳೆಸಿದಳ್.
ನಿರರ್ಗಳ ಭಾಷಣ ಸಲಿಲ ಹರಿಯುತಿರೆ ಸ್ವಚ್ಛ
ಹಿಂದಿಯಲಿ ಸಂಸ್ಕೃತ ಸುಭಾಷಿತ ಪ್ರಮಾಣಂ
ಮುಂದಿಟ್ಟು ಸರಸ್ವತಿಯೇ ಧರೆಗಿಳಿತಂದು
ನುಡಿಯುತಿಹಳೋ ಎನಲ್ ಸರಳಮಾ ರಸಧಾರೆ !

ಇಂತಪ್ಪ ವಾಙ್ಮಯಂ 'ಸರಸ್ವತೀ' ಬಿರುದಂ
ದಯಪಾಲಿಸಿತು ಪ್ರೇಮ ಗೌರವಾದರಗಳಿಂ !
ಮರುವರುಷ ಪೆಣ್ಮಗುವಿಗೆ ಜನ್ಮವಿತ್ತು ಆ
ತನಕಂ ಜಗದ ತಾಯಾಗಿದ್ದ ರಮಾಬಾಯಿ ನಿಜ
ತಾಯಾದಳ್ ಸ್ವಂತ ಮಗು ಮನೋರಮಾಳಿಂಗೆ !
ಆ ಪರಮ ಸಂತಸಂ ಕೆಲಗಾಲ ಮಾತ್ರಮೆನೆ
ಎಂತಪ್ಪ ಸಂಕಟಮಾ ಸೃಜನಶೀಲಳಿಗೆ ! →

ದುರ್ವಿಧಿಯು ಆವ ಸಂಚಿನಲಿ ತನ್ನಯ ರುದ್ರ
ಪಾಶವೊಗೆದು ನಾಟಕವಾಡಿತೋ ನಿರ್ದಯದಿ !
ಹದಿನೆಂಟು ಮಾಸಗಳ ಸಂಸಾರ ರಥ ಚಕ್ರ
ಮುರಿದುದು ವಿಪಿನ ಬಿಹಾರೀ ಮೇಧಾವಿ ಕಾಲರಾ
ಉಗ್ರರೋಗ ದವಡೆಯಲಿ ಸಿಲ್ಕಿ ಮರಣಿಸಲ್ಕೆ !
ಎಳೆಯ ಕೈಗೂಸು ತಬ್ಬಲಿಯಾದಳ್....ಅಂಥ
ಸಂಕಷ್ಟದಲಿ ಸೆರೆಸಿಲ್ಕಿದೊಡಂ ಆ ಸರಸ್ವತಿ
ಬೆದರಿದಳೆ ? ವಿಜಾತೀಯವಳೆಂದು ಕುಟುಂಬದ
ಆಶ್ರಯಂ ಬಾರದಿರೆ ಬೇಡಿದಳೆ ? ಕಠಿಣಪ್ಪ
ವಿಧವಾ ವ್ರತ ಪಿಡಿದಳೆ ? ಗೋಳಾಡಿ ನರಳಿದಳೆ ?
ಜಾತಿ ಬಾಂಧವರ್ ಕಡೆಗಣಿಸೆ ಲೆಕ್ಕಿಸಿದಳೇಂ ?

ಮಾನವೀಯತೆಯಿಲ್ಲದ ಮಾನವ ಜಂತುಗಳ
ಅತ್ಯಂತ ಕ್ರೂರವಿಾ ಪ್ರವೃತ್ತಿಯಂ ನೋಡಾ !
ತಾಯಿ ತಂದೆಯರಿಲ್ಲ; ಸಹಜಾತರಿಲ್ಲ; ವರ
ಪತಿಯಿಲ್ಲ ಎನೆ ಬೃಹತ್ ಸಮಾಜದಲಿ ತನ್ನ
ಯಾರೊಬ್ಬರಾದೊಡಂ ಕಂಡಾರೆ ಎಂದೆನಿತೊ
ಬಾರಿ ಅರಸಿ ನಿರಾಶವಾದುದವಳ ಊದಾ
ವರ್ಣದ ಸಜಲನಯನಗಳಾಶಾ ಪ್ರವೃತ್ತಿ !
ಹಾಯ್ ದಿಟ್ಟೆ–ಧೀಮಂತೆ ಏನಾದೊಡಂ
ಹೃದಯ ಕಮಲ ಕೋಮಲವಲ್ತೇ ಪೆಣ್ಮಣಿಗೆ ?

ಒರ್ಮೆ ನನಗೇಕಿಂಥ ಭಂಗಗಳಂ ನೀಡಿದ
ಭಗವಂತ ? ಎನೆ ಗದ್ಗದಿತ ವಾಣಿಯಲಿ. ಒಡನೆ
ಅಂತರ್ವಾಣಿ "ಈ ಗಾಡಾಂಧಕಾರ ತುಂಬಿರುವ
ಭಾರತದಲಿ ನೀನೇಕೆ ಸ್ವಸುಖವ ಬಯಸುವೆ ?
ಇಂತಪ್ಪ ದೀನ ದಲಿತರ ಅಪಾರ ದುಃಖಿತರ
ನೆನೆನೆನೆದು ನಿನ್ನ ಸಂಕಟವಂ ನಿಶ್ಚಿಂತೆಯಿಂ 

ಬದಿಗೊತ್ತು ! ಏನೇ ಬರಲಿ ಧೈರ್ಯಸ್ಥೈರ್ಯಮಂ
ಕಳೆಕೊಳದೆ ಮುನ್ನುಗ್ಗಿ ಧಗಧಗಿಸಿ ಉರಿಯುತಿಹ
ಅಗ್ನಿಜ್ವಾಲೆಗೆ ತಲೆಗೊಟ್ಟು ಆತ್ಮಶಾಂತಿ ಪಡೆ !"
'ಹಾ ! ಎಂಥ ದಿವ್ಯ ಸಂದೇಶ ! ನಾನಿನ್ನು ಸೋಲೆಂ!'
ಎಂದಳಾ ದಿಟ್ಟತನದ ಧೀರ ಮಹಿಳಾಮಣಿ !

ದೂರ ನೀಲನೀಲಾಂಬರದಲಿ ಮಿನುಮಿನುಗುವ
ನಕ್ಷತ್ರವೊಂದು ಕೆಳಗುರುಳಿದುದು ಆ ಕ್ಷಣ
ಕನಿಕರಿಸಿ ಸಾಂತ್ವನಂ ನೀಡಲಿಳಿತಂದುದೋ
ಎನಲ್ಕೆ! ಒಡನೆ ಗಗನದ್ದೇಶಕೆ ಕರ ಜೋಡಿಸಿ–
ತನ್ನ ಮನಃಸಂವೇದನೆಯುಂ ನಿವೇದಿಸಿ–
ಕೊಂಡಳಾ ಕನ್ನಾಡಿನ ಕನ್ನಡ ಕಾವೇರಿ !

ದಿನಮಾನಮುರುಳುತಿರೆ ಎಡೆವಿಡದೆ ಆರಾರ
ಸುಖದುಃಖಗಳನಿನಿತು ಗಮನಿಸದೆ, ಸುಧರ್ಮಿಣಿ
ಕಾಲನಂ ಬೆಂಬಿಡಿದು, ಎಳೆಮಗುವಿನ ಪೋಷಣೆ
ಮೇಣ್ ದಲಿತ ಸ್ತ್ರೀಯರುದ್ಧಾರಕಾಗಿ ಲೇಖನ
ಭಾಷಣಗಳ ಸರಮಾಲೆ ಸುರಿದು ತಾಂ ಪುಣೆಗೈದು
'ಆರ್ಯ ಮಹಿಳಾ ಸಮಾಜ' ಎಂಬ ಪೆಸರಿನ ಘನ
ಸಂಸ್ಥೆಯುಂ ಸ್ಥಾಪಿಸಿ, ರಾನಡೆ ಮೇಣ್ ಭಂಡಾರ್–
ಕರ್ ಮುಂತಪ್ಪ ಧುರೀಣರಂ ಭೇಟಗೈದು ಈ–
ಯೊಂದು ಕಾರ್ಯಕ್ರಮಗಳಿಗೆ ನೆರಂ ಕೋರಿದಳ್.

ಆಗಲಾ ಧುರೀಣರ್ ಎಳ್ಚತ್ತು ಬೆಂಬಲಿಸಿ
ಮಹಾರಾಷ್ಟ್ರದಾದ್ಯಂತ ಸಂಸ್ಥೆಯ ಶಾಖೆಗಳ್
ತೆರೆದರ್ ಸಾವಿರದೆಂಟನೂರೆಂಭತ್ತೆರಡರಾ
ಕಾಲಮಾನದಲಿ. "ಇಂಗ್ಲೀಷ್ ಎಜ್ಯುಕೇಶನ್
ಕಮಿಷನ್" ಮುಂದೆ ತಮ್ಮ ಧ್ಯೇಯ ಧೋರಣೆಯುಂ
ಶ್ರುತ ಪಡಿಸಲ್ಕೆ ಅವರವಳ ಬೆನ್ನಂ ತಟ್ಟೆ →

ಪುಷ್ಟೀಕರಿಸಿದರ್. ರಮಾಬಾಯಿಯ ಪ್ರಯತ್ನ
ವಿಕ್ಟೋರಿಯಾ ರಾಣಿಯ ಕಿವಿಯವರೆಗೂ ತಲ್ಪಿ
ಕೀರ್ತಿಪಡೆದಳ್ ! ಕಸ್ತೂರಿ ಪರಿಮಳಂ ತಂತಾನೆ
ಪಸರಿಸುವೊಲ್ ! ಆಗಳ್ ಲೇಡಿ ಡೆಫರಿನ್‌ರವರ
ಸ್ತ್ರೀಯರ ಚಿಕಿತ್ಸಾ ಆಂದೋಲನಂ ಒಡಮೂಡೆ
ರಮಾಬಾಯಿಗಾಗಂ ತನ್ನೊಂದು ಪಿರಿ ಕುಂದು
ತೋರ್ದ್ದುದು. ಅದೇನೆನಲ್ ಇಂಗ್ಲೀಷ್ ಭಾಷಾ
ಅಜ್ಞಾನ ! ಹಿಂದಿ ಸಂಸ್ಕೃತಗಳ ಪಾಂಡಿತ್ಯ
ವೇತ್ತೃಯಾದೊಡೆ ಸಾಲದೆಂಬರಿವು ಮೂಡೆ
ಸುದತಿ ಸಾವಿರದೆಂಟನೂರೆಂಭತ್ತಮೂರರಲಿ
ಇಂಗ್ಲೆಂಡಿಗೆ ಪಯಣಂ ಬೆಳಸಿದಳ್. ಅಲ್ಲಿರ್ಪ
ವೆಂಟ್‌ಜ್ ಪೆಸರಿನ ತಾಣದಲಿ 'ಮೇರೀಸ್
ಹೋಂ' ನಲ್ಲಿ ನೆಲೆನಿಂದು ಕ್ರೈಸ್ತಧರ್ಮದಿ ಭಾವ
ಬಲಿಯೆ, ತಾನದಂ ಸ್ವೀಕರಿಸಿದಳ್ ! ಅನಂತರಂ
ಅಲ್ಲಿನ ಚೆಲ್ಟನ್ ಹೋಮಿನ ಲೇಡೀಸ್ ಕಾಲೇಜ್-ನ
ಸಂಸ್ಕೃತ ಪ್ರೊಫೆಸರ್ ಆಗಿರ್ದು ಎರಡು ವರ್ಷ
ಕಾಲ ಸೇವೆ ಸಲ್ಲಿಸಿದಳ್. ಅಂದಿನ ದಿನಮಾನ
ಹಿತಮೆನಿಸಿದೊಡಂ ಬಡ ಭಾರತ ಸ್ತ್ರೀಯರ
ಗುಲಾಮಗಿರಿಯಂ ಎಂದಾದೊಡಂ ಮರೆಯಲುಂಟೆ ?
ಎಂತಿವರ ಉದ್ಧಾರ ? ಎಂಬ ಪ್ರಶ್ನೆಯು ಶೂಲ
ಮನಮಂ ಇರಿಯುತಿರ್ದುದು ಪಗಲಿರುಳ್. ಆಗಳ್,
ಅಮೆರಿಕೆಯಲಿರ್ದ ತನ್ನ ಚಿಕ್ಕಪ್ಪನ ಕುಮಾರ್ತಿ
ಆನಂದಿಬಾಯಿ ಜೋಷಿಯಿಂ ಆಮಂತ್ರಣಂ
ಬರಲ್ ಅಮೆರಿಕಾಕ್ಕೆ ತೆರಳಿದಳ್ ರಮಾಬಾಯಿ !

ಅಲ್ಲಿಯ ಶಿಕ್ಷಣ ಪದ್ಧತಿ ಮನಮಂ ಸೆಳೆಯಲದಂ
ಮೆಚ್ಚಿ ನೆಚ್ಚಿ ಸ್ವತಃ 'ಕಿಂಡರ್ ಗಾರ್ಟನ್ ಟ್ರೈನಿಂಗ್', →

ಪಡೆದು ಉತ್ತೀರ್ಣಳಾಗಿ "ದಿ ಹೈ ಕ್ಲ್ಯಾಸ್ಡ್ ಹಿಂದು
ವುಮನ್," ಎಂಬ ಪುಸ್ತಿಕೆಯಂ ವಿರಚಿಸಿ, ಅದರೊಳ್
ಹಿಂದೂ ಮಹಿಳೆಯರ ಮೇಲೆ ನಡೆಯುವ ಸಾಮಾಜಿಕ
ಅತ್ಯಾಚಾರಗಳ ಚರ್ಚೆಯಂ, ಮನಃಚಿತ್ರಮಂ
ಬಿಚ್ಚಿ ಲೇಖಿಸಿದಳೆನೆ ಧೈರ್ಯಮೇ ಧೈರ್ಯ ಕಣ !
ಆಗಣ ಪುರುಷ ಪ್ರಧಾನ ಭಾರತವ ನೆನೆಯಾ !

"ರಮಾಬಾಯಿ ಅಸೋಸಿಯೇಷನ್" ಭಾರತದಲಿ
ತೆರೆದು ಅದರ ಮೂಲಕ ಹಿಂದೂ ವಿಧವೆಯರ
ಜೀವನಕೆ ಸರಿಯಾದ ಮಾರ್ಗಯೋಗಮಂ ತಾಂ
ಕಲ್ಪಿಸಿ, ಮೇಣೊಂದು ದಶಮಾನ ಪರ್ಯಂತರಂ
ವೆಚ್ಚಮಂ ಭರಿಸಲ್ಕೆ ಸುಭದ್ರ ತಳಹದಿಯಂ
ನಿರ್ಮಿಸಿದ ಸಾಹಸ ಕಾರ್ಯ ರಮಾಬಾಯಿಯದು !
ಈ ಪ್ರಕಾರದೊಳ್ ರಮಾಬಾಯಿ ಕಟ್ಟಿದ ಕನಸು
ನನಸಾಗಿ ಕಾರ್ಯರೂಪಕೆ ಬರಲಾ ಗತಿಹೀನ
ಅಸಂಖ್ಯವಿಧವೆಯರ ನರಕ ಸದೃಶ ಜೀವನಂ
ಮುಂಬೆಳಕಿನ ಕಿರಣಗಳಂ ಕಣ್ತುಂಬ ಕಂಡು
ಉಸಿರಾಡಿದುದು ಸರಾಗಂ !

ಶತಮಾನದ ಹಿಂದೆ
ಗಾಢಾಂಧಕಾರ ಮುಸುಗಿದ ಜೀವನದ ತೆರೆಯ
ಕಿತ್ತೊಗೆಯೆ ಕಡು ಸಾಸಂಗೈದ ರಮಾಬಾಯಿಯಾ
ಧೈರ್ಯಸಂಪತ್ತಿ ಸಾಮಾನ್ಯಮಲ್ತು ಧನ್ಯೆ !
ರಮಾಬಾಯಿ ನೀನಲ್ತೆ ಸ್ತ್ರೀಕೋಟಿಗೆ ಮೇಲ್
ಪಂಕ್ತಿ ? ನಿನ್ನಂತೆಲ್ಲರ್ ಎಚ್ಚತ್ತೊಡೆಲ್ಲಿಯು
ಹಿನ್ನಡೆ ? ಮತಿಹೀನ ಅರ್ಥಹೀನ ಶಾಸ್ತ್ರಗಳ
ಕಿತ್ತೊಗೆದು ? ಯಜಮಾನಷಾಹಿಯಂ ಪಿಂತಿಕ್ಕಿ
ಒಳಗಣ್ ತೆರೆದೊಡೆಲ್ಲಿಯು ಕತ್ತಲೆ ? ತಿಳಿದು ನೋಡ !

ಅನಂತರಮಾ ಸಾವಿರದೆಂಟನೂರೆಂಭತ್ತೊಂ–
ಭತ್ತರಲಿ ರಮಾಬಾಯಿ ಮರಳಿದಳ್ ಭಾರತಕೆ.
ತಾಂ ಕ್ರೈಸ್ತಧರ್ಮಮಂ ಸ್ವೀಕರಿಸಿರ್ದೊಡದಂ
ಕ್ರೈಸ್ತರನನುಕರಿಪ ಇಚ್ಛೆಯಣಂ ಕಿಂಚಿತ್
ಇರದೆ ಭಾರತೀಯತ್ವದೊಳ್ ಪೆಣ್ಣಿನುದ್ಧಾರವ
ಮನದೊಳಿಟ್ಟು "ಶಾರದಾಸದನಮಂ" ಸ್ಥಾಪಿಸಿ
ಸ್ತ್ರೀಶಿಕ್ಷಣದೊಳ್ ನಾಲ್ಕಂಶಮಂ ರೂಪಿಸಿದಳ್.
"ಪ್ರಥಮ ಹೆಜ್ಜೆಯೊಳ್ ವಿದ್ಯಾರ್ಥಿನಿಯರ್ ಈ
ಸಮಾಜದ ಕುಶಲ ಸದಸ್ಯರಾಗಿರಲಕ್ಕು.
ಮೇಣಧ್ಯಾಪಿಕೆಯರ್, ದಾದಿಗಳ್, ಗೃಹಿಣಿಯರ್
ಮುಂತಪ್ಪ ಕಾರ್ಯಕರ್ತರ ತರಬಿಯತ್ತು ಮೇಣ್
ಯಜಮಾನಷಾಹಿಗೆ ನಮ್ರ ವಿದಾಯ; ಕೊನೆಯದಾಗಿ
ಪಾಶ್ಚಾತ್ಯ ರೀತಿ ನೀತಿಯನುಕರಣೆ ಕೂಡದು.
ಭಾರತೀಯರೊಳ್ ಭಾರತ ವಾತಾವರಣಮೇ
ಇರವೇಳ್ಕುಂ, ಏಗಳುಂ ಸದನ ಭಾಗ್ಯಹೀನ ಸ್ತ್ರೀ
ಸಂಕುಲಕೆ ಯೋಗ್ಯಮನೆ ಇರಲಕ್ಕು; ಮತ್ತಮಾ
ಮುಗ್ಧದುಗ್ಧ ವಿದ್ಯಾರ್ಥಿನಿಯರಂ ಮಂಕು ಮರಳು
ಮಾಡಿ ಕ್ರೈಸ್ತ ಧರ್ಮಿಗಳಾಗಿಸಿ ಭವಿಷ್ಯಮಂ
ಪಾಳ್ಗೆಯ್ಯಬಾರದೆಂಬ ವಿವೇಚನಾ ಸೂತ್ರಂ !"
ಇಂತಪ್ಪ ಸದನ ಶಾರದೆಯ ಆಶೀರ್ವಾದಮೊ
ಎನಲ್ಕೆ ಅವತರಿಸಿತು ನಿರ್ಭಾಗ್ಯರ ವರವಾಗಿ !
ಸಾವಿರನೆಂಟನೂರೆಂಬತ್ತೇಳರಲಿ, ಆಗಣ
'ರಮಾಬಾಯಿ ಅಸೋಸಿಯೇಷನ್' ಆಶ್ರಮದ
ಅವಧಿ ಪರಿಸಮಾಪ್ತಿಯಾಗಲ್ ರಮಾಬಾಯಿಯುಂ
ಅಮೆರಿಕೆಗೆ ಪುನರಪಿ ಪಯಣಿಸಿ ಕಾರ್ಯಸಾಧನೆ
ಸಾಧಿಸಿ ಸ್ತ್ರೀಸೇವಾ ಕಾರ್ಯದೊಳ್ ಮನವಿಟ್ಟು, →

ಭಾರತಕೆ ಪಿಮ್ಮರಲಿ "ಮುಕ್ತಿ"ಯೊಳ್ ಇನ್ನೊಂದು
ಆಶ್ರಮಮಂ ಕಟ್ಟಿ "ಕೃಪಾಸದನ" ಎಂದ್ಹೆಸರಿಸಿ
ಭಾಗ್ಯಹೀನರ ತಾಯಿಯಾದಳ್ ರಮಾಬಾಯಿ !
ಸ್ವಸುಖಮಿನಿತು ಗಮನಿಸದೆ ಸ್ತ್ರೀತ್ವಕೆ ಕಳಂಕ
ತಾರದೆ ಇಡೀ ಜೀವಮಾನಮಂ ದುಃಖಿಗಳ,
ದೀನಾತಿದೀನರ ಪರಮ ಸೇವೆಗೆ ವಿನಿಯೋಗಿಸಿ
ಕುಂದಿಲ್ಲದೋಲ್ ಸಾಧನೆಗೈದ ರಮಾಬಾಯಿ
ಸದ್ವಂಶ ಸಂಭೂತೆ. ಸ್ವತಃ ಕಷ್ಟನಷ್ಟಂ
ಅನುಭವಿಸಿದ ಪರಿಪಕ್ವ ಬೌದ್ಧಿಕ ಕಲ್ಪಲತೆ !
ನೀನಲ್ತೆ, ಆಚಂದ್ರಾರ್ಕ ಕೀರ್ತಿಶಾಲಿನಿ ?

ಸುಪುತ್ರಿ ಮನೋರಮಾ ಅಮೆರಿಕೆಯೊಳ್ ಶಾಲಾ
ಉಚ್ಚ ಶಿಕ್ಷಣಂ ಮುಗಿಸಿ ಭಾರತಕೆ ಮರಳಿ,
ಮುಂಬೈ ವಿಶ್ವವಿದ್ಯಾನಿಲಯಕೆ ಪದಾರ್ಪಣೆ
ಮಾಡಿದಳ್. ಪರಿಪಕ್ವ ಸ್ವಾನುಭವ, ತಾಯಿಯಾ
ಜಾನದೋಜೆ ಒಗ್ಗೂಡೆ ಸದ್ಗುಣವ ಪೇಳಲೇಂ ?
ಮನೋರಮಾ ಬಿ.ಎ. ಮುಗಿಸಿ ಶಾರದಾ ಹೈಸ್ಕೂಲಿನ
ಪ್ರಿನ್ಸಿಪಾಲ್ ಆಗಿ ಜನನಿಯಂ ಸರ್ವತ್ರ ಸದಾ
ಬೆಂಬಲಿಸಿದಳ್. ಆ ಮಾನಿನಿ ಸಾವಿರದೊಂಬೈ-
ನೂರಹನ್ನೆರಡರಲಿ ಗುಲ್ಬರ್ಗಕೈದು ಆ ಬಡ
ಜನಕೋಟಿಯಂ ಕಂಡು ಮರ್ಮರ ಮರುಗಿ ಅವರ
ಸೇವೆಯಂ ಕಿಂಚಿತ್ ಸಲಿಸೆ ಕ್ರೈಸ್ತ ಶಾಲೆಯಂ
ತೆರೆದಳ್. ಅಹ, ನಡೆಯಲದು ಪ್ರಗತಿ ಪಥವಿಡಿದು
ಬಾಲೆ ನಲಿದಳ್ ತದೇಕ ಮನದಲಿ ! ಉತ್ಸಾಹಂ
ಚಿಲುಮೆಯಾದುದು ದಿನದಿನಂ.

ಹಿಂದುಳಿದ ಪ್ರಾಂತ್ಯ
ಕೊಳಕುಕೊಚ್ಚೆಗಳ ದುರ್ನಾತವಿರೆ ಪೇಸಿದಳೆ ?

→

ಪಿಮ್ಮರಳಿ ಸೋಲೊಪ್ಪಿದಳೆ ? ಪಿರಿಯ ರಾಷ್ಟ್ರಗಳ
ವಿಜೃಂಭಣೆಯುಂ ಕಂಡುಂಡ ಜಾನಸುಂದರಿ !
ತಾನೇತಾನ್ಮೈಸಿ ಪಿಡಿದಿರಲ್ ಕಠಿಣ ವ್ರತವುಂ
ಏನಾದುದು ಚಿತ್ರಕಲ್ಪವುಂ ಕಡೆದು ಊಹಿಸ!

ಹಾ, ಅಲ್ಲಿಯುಂ ದುರ್ವಿಧಿ ಆವಾವ ಕ್ಷಣದಿ
ಹೊಂಚಿರ್ದುದೊ ಪಾಶವೊಗೆಯೆ ಇನಿತು ಕರುಣೆಯುಂ
ತೋರದೆ ಸೆಳೆದೊಯ್ದುದು ಪುತ್ರಿಯುಂ ಅಲ್ಲಿಂದೆ !
ಹೆತ್ತೊಡಲ ಗತಿಯೇಂ ಮನಮಥಿಸಿ ಯೋಚಿಸಾ !
ಕೆಲವಾರು ವರ್ಷಮಾನಗಳ್ ನಡೆದಿದ್ದ ಶಾಲೆ
ಆವ ಕರ್ಮಗತಿಯೊ ದುರ್ದೆಶೆಯುಂ ಕಂಡಿತು !

ಆ ಘೋರ ಆಘಾತದಿಂ ಮನಃಪ್ರಾಣಗಳ್
ತಲ್ಲಣಿಸಿದೊಡಂ ಅದೃಷ್ಟಹೀನ ಜನನಿಯು
ತನ್ನೊಂದು ಧ್ಯೇಯಮಂ ಬಿಡದೆ ಮುಂದರಿಸಿದಳ್
ಎಂದಿನವೊಲ್ ! ಅಂತರಾತ್ಮ ಪ್ರೇರಣೆ ಸದಾ ಧೈರ್ಯ
ಸ್ಥೈರ್ಯಮಂ ನೀಡಿ ಸಾಂತ್ವನಂಗೊಳಿಸುತಿರ್ದುದು
ತಾಯಿಯೊಲ್ ! ರಮಾಬಾಯಿ ತನುಮನ ಸೋಲ್ವನ್ನ,
ಜೀವಂ ಬಳಲಿ ಸಗ್ಗಮಂ ಬಯಸುವನ್ನ ದುಡಿದು
ಸಾವಿರದೊಂಭೈನೂರಿಪ್ಪತ್ತೆರಡರ ಏಪ್ರಿಲ್
ಐದನೇ ತೇದಿ ಪರಮಾತ್ಮನ ಪದತಲಮಂ
ಸೇರಿ ಪರಮ ಸಾಯುಜ್ಯಮಂ ಪಡೆದಳ್ ! ತನ್ನ
ಬಡಭಾರತದ ದೀನ ಭಗಿನಿಯರ ಕಂಗಳಲಿ
ಕಂಬನಿಯ ಕೋಡಿಯುಂ ಹರಸಿ ! ಕವಿಯ ಕಾವ್ಯ
ಕಾನನದಲಿ ಮಲರ್ದ ಮದನ ಮಲ್ಲಿಗೆಯಾಗಿ !

—o—

ದಟ್ಟದಾರಿದ್ರ್ಯದಿಂ, ನರಳ್ದ ಬಡ ಚೆನ್ನಿಗಂ
ದಿನದಿನಂ ಚಿಂತೆಯಿಂ ಕೊರಗಿ ಕರಗಿ ಸಂಕಟ–
ಸಂಕಷ್ಟಗಳಿಂ ನಲುಗಿ ಏಂಗೈಯಲ್ಬಾರದೆ
ಮನಂಗೆಟ್ಟು ಮತಿಗೆಟ್ಟು ದಟ್ಟಡವಿಗೈದು
ಆರೂ ಅರಿಯದೊಲ್ ಕೊರಳ್ಗೆ ಉರುಳ್ ಬಿಗಿದು
ಜೀವವಂ ಕೊನೆಗಾಣಿಪ ಯೋಚನೆಯುದಿಸೆ ಮನದಿ,
ಪಿಡಿದಂ ಅರಣ್ಯದ ಕುಪಥಮಂ ! ನಡೆಯೆ ಮುಂದೆ
ಮನದಿ ದುಗುಡ ಒತ್ತಿ ಹೃದಯದಿ ಸಂಕಟವುಕ್ಕಿ
ಎಂತು ಕೊರಳ್ಗಟ್ಟೆ ನೋವುಂಬೆನೊ ಎನುವೊಂದು
ಭಯ ಸಂಕಟದಿಂ ಜೀವ ತಲ್ಲಣಿಸಿ ಕಂಬನಿಯು
ಒಸರಿದುದು ಕಂಗಳಲಿ. ಮನವಳ್ಕಿ ಜೀವವಳ್ಕಿ
ಕಾಲ್ಗಳ್ ನಡುಗುತಿರೆ ನಡೆಯಲಾರದಲ್ಲಿಯೇ
ಕುಸಿದು ಕುಳಿತಂ !

ನೆಟ್ಟದಿಟ್ಟಗೆ ಗಿಡಮರದಲಿ
ಪಕ್ಷಿ ಸಂಕುಲಂ ಬೀಳೆ "ಅವುಗಳ್ ಗೆಯ್ದುಂಬ
ಭಂಗಮಿನಿತಿಲ್ಲದೆ ಸೊಗದಿಂ ಇಲ್ಲಿಂದಲ್ಲಿ
ಅಲ್ಲಿಂದಿಲ್ಲಿ ಪಾರಾಡಿ ಪಾಡಿ ಬದುಕುತಿರ್ಪುವಂ !
ಎನಗಿದೇಂ ಭಂಗ ಬನ್ನಂ ಬೆಂಬಿಡಿದು
ಕಾಡುತಿರ್ಪುದು. ಇದು ಜನ್ಮಜನ್ಮಾಂತರದ
ಕರ್ಮಮಲ್ತೆ ? ಇದನೆಂತು ಪರಿಹರಿಕುಂ ದೇವ !
ಆನಿಂದಿಗುಂ ಪಟ್ಟ ಶ್ರಮ ವ್ಯರ್ಥವಲ್ತೆ ?"
ಎನುತ್ತೆ ಬಿಸಿಯುಸಿರಂ ಬಿಟ್ಟು ಅಲ್ಲಿರ್ದೊಂದು
ಕರ್ಬಂಡೆಯನೇರ್ದಂ. ಬನ ಬದಿಯ ಸಮತಲಂ



ಲೆಕ್ಕಿಬೇಲಿಯಿಂದಾವರಿಸಿರ್ದು, ವಿಸ್ತರದ
ಶಾಲಿವನ ಸುವರ್ಣದ ಪೈರಿನ ನಲ್ ಬೆಳಸುಂ
ತಂಗಾಳಿಯಾಟದಿಂ ಅತ್ತಿತ್ತ ಓಲಾಡಿ
ತಲೆದೂಗುತಿರೆ ಹರ್ಷವಂ ಸೂಸುವ ತೆರದಲಿ.
"ಅಹಃ ! ಏಂ ಸೊಗವಾ ಬೆಳೆದ ಪೈರಿನ ಚಿತ್ತಾರ !
ಒಡೆಯನ ಘನ ಪುಣ್ಯಮೆ ಮುಂಬೆಳೆದು ನಿಂತವೊಲ್
ಈ ಜಗದೊಳ್ ಎಂತಪ್ಪ ಪುಣ್ಯಾತ್ಮರಿರ್ಪರ್ !
ಎನಗೇಕಿಲ್ಲವೈ ಈ ಪುಣ್ಯಯೋಗ ? ಆನುಂ
ಗೈದಪರಾಧಮೇಂ ? ದೈವವೇಕಿಂತು ನಿರ್ದಯಿ ?"
ಎನಲಾ ಬಡವಂ, ಕೃತ್ತಿಕಾನಿಲಂ ಸುಯ್ಯನೆ
ಸುಯ್ದುಯ್ದು ಬೀಸಿವೀಸಿ ಬಿತ್ತರಿಸಿದಂ "ಎಲೆ,
ಚೆನ್ನಿಗ ಒಳಿತು ಕೆಡುಕುಗಳ್ ನಿನ್ನೊಳಗಲ್ಲದೆ
ದೈವದೊಳಿಹುದೆ ?"
ಅದಂ ಕೇಳ್ದ ಆ ಚೆನ್ನಿಗಂ
ಮನವೆರ್ಚಿ ಉನ್ಮತ್ತತೆಯೊಳೆಂತಂತು ಮೊಗದೊಳ್
ಕರ್ಪುಗಿಸಿ "ಎಲ್ಲರೆಂಬುದಿಂತೆ ಹಣೆ ಬರಹಂ
ಅಳಿಸುವರಾರಿಲ್ಲಮೆನೆ ಉತ್ಪ್ರೇಕ್ಷೆಯಿಲ್ಲಂ !
ಓ ದೇವ ! ಪುಟ್ಟನಿಂ ಕಂಡೆನಿಲ್ಲಂ ಸೊಗದ
ಸುಧೆಯುಂ. ಅರೆಹೊಟ್ಟೆಯೊಳೆ ಸಾಗಿದುದು ಬರ್ದುಕು
ಇನ್ನೆಲ್ಲಿಯು ಒಳ್ಳಿತು ? ತಣ್ಣಗೆ ಕಣ್ ಮುಗಿದೊಡೆ
ಸಾಲ್ಗುಂ ! ಎನೆ ಪಳಿಯದಿರ್ !"
"ಅಂತಾದೊಡೆ, ಇದೋ
ಈ ಬಳ್ಳಿಯುಂ ಕೊರಳ್ಗಿತ್ತು ನೇಣು ಬಿಗಿಯೈ
ಪೆರ್ಮರದ ಕೊಂಬೆಗೆ" ಎನೆ, ಕಾರ್ತಿಕಾನಿಲಂ.

ಬಡ ಚೆನ್ನಿಗಂ ನೇಣಿನಗಂಬದೊಳ್ ಉಸಿರ್ಗಟ್ಟಿ
ಸಾಯುವ ಭಂಗಮುಂ ನೆನೆದು ನಡುಗಿ ಮರುನುಡಿದಂ
"ಹಾ ! ಕೊರಳ್ಬಿಗಿದು ಪ್ರಾಣಕಳೆವುದು ಕಷ್ಟವೈ ! →

ನೋವಿಲ್ಲದೆ ತೆಕ್ಕನೆ ಹೋಹಲಕ್ಕು ಪ್ರಾಣಂ !"
ಆಗಳಾ ತಂಗಾಳಿ ಮೂಂಕರಿಸಿ ನಗುವವೊಲ್
ರೊಯ್ಯನೆ ಸುಳಿಸುತ್ತುತ ಸಾರ್ದುದು ಬನದಿ ನುಗ್ಗಿ !
ಬಡಚೆನ್ನಿಗಂ ಬೆವರಿಳಿದ ಮೊಗವಂ ಕೈಯಿಂದೆ
ತೀಡಿ ಮನನೊಂದು ತನು ಭಾರವಾದೊಲ್ ತೋರೆ
ಎಂತು ಪ್ರಾಣವಂ ನೋವಿಲ್ಲದೆ ಕಳೆವುದೆಂಬ
ಚಿಂತೆಗೆತ್ತು ಕಣ್ಣೊಳ್ ನೀರ್ದುಂಬಿ ನರಳಿದಂ,
ಸಾವಂ ನೆನೆದು !
ವನವಿಸ್ತೀರ್ಣದೆಲ್ಲೆಡೆಯುಂ
ಎಲೆಗಾಳಿಯಾಟದಿಂ ಎಲೆಎಲೆಗಳ ಮರ್ಮರ
ಲೀಲೆ ಮೃದು ಮಂದನೆ ಶ್ರುತಿಯಂ ಮೀಂಟುತಿರೆ
ತನ್ನೆದೆಯ ವೀತಗಾನವಂ ಚೋದಿಸುವವೊಲ್ !
ಚೆನ್ನಿಗಂ ಕರ್ಬಂಡೆಯಿಂದಿಳಿದು ಮುಂಬರಿಯೆ
ಬೃಹತ್ ವಿಪಿನ ವಾರ್ಧಿ ಪರಿವೃತ ಕರ್ನೀಲ
ಶೈವಾಲಹೀನ ಜಲರಾಶಿ ತುಂಬಿ ಥಳಥಳ
ಥಳಿಸುತಿರ್ದುದು ಕರ್ಮಣ್ಣ ಕಡಾಯಿಯಂ ಮೀರ್ದ
ಪುಷ್ಕರಣಿಯಲಿ. ಚೆನ್ನಿಗಂ ನೀರ್ಕುಡಿದು ದಣಿವು
ನೀಗಲೆಂದು ನೀರಿಗಿಳಿಯಲ್ ಜಲದೇವಿ "ಎಲೆ,
ಚೆನ್ನಿಗ ! ಬಡತನದಿಂ ತೊಳಲಿ ಬಳಲಿರುವೆ ಬಾ !
ಬಾರೈ ! ಎನ್ನ ಮಡಿಲಲಿ ಸುಖ ನಿದ್ರಿಸು !"
ಕೇಳ್ದು
ನುಡಿಯಣಂ ಕರ್ನೀಲ ಜಲರಾಶಿಯೆಡೆ ನೋಡೆ,
ಎರ್ದೆ ಗಡಗಡ ನಡುಗಿ ಬೆಮರಿಳಿದು ಮನಗೆಟ್ಟು
ಭಯಭೀತಿಯ ಗಾವರ ಕಾವಳಿಸೆ ಬಿಸುಸುಯ್ದು
ಪಿಂದಿರುಗಿ ವನಾಂತರವಂ ಬೊಕ್ಕಂ ಜಲಧಿ
ಕಣ್ಗೆ ಕಾಣದವೊಲ್ ! ವಿಪಿನ ವಿಸ್ತರಣಂ ಪೊಚ್ಚ
ಪೊಸ ಪಚ್ಚ ಪಟ್ಟುಡೆಯನುಟ್ಟವೊಲ್ ಕೃತ್ತಿಕಾ →

ಪ್ರಭುವಿನ ಸುಖಾಶ್ರಯದೆ ನಳನಳಿಸಿರೆ ನೋಳ್ಪ
ಕಣ್ಗಿಂಬಾಗಿ ! ವನದೇವಿ ಮುದದಿಂ ಮೋದದಿಂ,
"ಏನ್ಗೆ ಚೆನ್ನಿಗ ! ಮೃತ್ಯುವಶನಾಗಿ ಸಂಕಷ್ಟ
ಭಾರಮಂ ಕಳೆವೊಂದು ಬೆಸನದಿಂದೈತಂದಿರೆ
ಕೊರಳ್ಗೆ ಮಿಣಿಯುಂ ಬಿಗಿಯಲಾರೆ; ಕೊಳದಾಳಕೆ
ಜಿಗಿಯಲಾರೆ. ಮತ್ತೇಂ ನಿನ್ನ ಕೊನೆಯಾಸೆಯೈ ?"
"ಅಮ್ಮ, ತಾಯೆ ! ಸತ್ತು ಸ್ವರ್ಗವೇರುವುದೆನ್ನ ಗುರಿ !
ನೋವುಣ್ಣದೆ ಸುಲಭದಿ ಸಾಯ್ವುದನ್ನರಿಯೆನೈ !
ನೀಂ ಕೃಪೆಗೈದೊಡೆ ಸಲ್ವುದೆನ್ನ ಗುರಿ ಸುಲಭದಿ !"
"ಕೇಳ್ ಚೆನ್ನಿಗ ! ಇನ್ನೆಬರಂ ಅರೆಹೊಟ್ಟೆಯೊಳ್
ಬದುಕಿರ್ಪೆ. ಇಂ ನೆರೆ ಉಪವಾಸಮಿರೆ ಸಗ್ಗಕೆ
ಸಲ್ವೆಂ !"
"ಓ ! ಅಂತೆನೆ ಬಲ್ ಕಷ್ಟಂ ! ಅರೆಹೊಟ್ಟೆ
ತಾಳದಿರೆ ಎಂತುಪವಾಸಮಿರಬಲ್ಲೆನೈ ?"
ವನದೇವಿ ನಗುತಂ ನುಡಿದಳ್ "ನೀಂ ಪುಟ್ಟನಿಂ
ಮನುಜನಿರ್ದು ಮನುಜತೆಯಂ ಅರಿಯದಣುಗನೈ !
ಮೈಗಟ್ಟಿಯಿರ್ದು ದುಡಿಯುವ ಕೈಗಳಿರ್ದು ದುಡಿಯದೆ
ಉಂಬುದೆಂತೈ ? ಜಾನಿಸು ! 'ಶ್ರಮಮೇವ ಜಯತೇ'
ದುಡಿದು ದುಡಿದು ಶ್ರಮಿಸಿದಲ್ಲದೆಲ್ಲಿಯ ಬಾಳ್ ?

ಬಡ ಚೆನ್ನಿಗಂ ಮನದೊಳ್ ಜಾನಿಸಿ ತನ್ನೊಂದು
ಮತಿಗೆಟ್ಟ ಬಾಳ್ಗೆ ನೊಂದು "ಇನ್ನಾದೊಡಮೆನ್ನ
ಶ್ರಮವಂ ಶ್ರಮಿಸಿ ತನು ತೇಯ್ದು ಪಿಂಡಿ ಬಾಳ್ವೆಂ !"
ಎನಲ್ಕೆ ಬನದೇವಿ "ಸೊಗದಿಂ ಬಾಳ್ಗೆ !" ಎನುತಂ
ಪರಸಿದಳ್.

ಬಡ ಚೆನ್ನಿಗ ನೇರ್ಳೆ ಪಣ್ಗಳ
ಕಂಪಿಗೆ ಪಸುರ್ಗರಿಯ ಗಿಳಿವಿಂಡು ದಂಡೈಸಿ →

ಬಂದೆರಗುತಲಿ ಕೆಮ್ಮೊನೆಯ ಹಿಗ್ಗಲಿಸಿ ಪಣ್
ಗೊಂಚಲ್ಗೆ ಬಾಯಿಡಲ್ ಒಂದನೊಂದು ತಳ್ಳುತ
ಪಿಂತಿಕ್ಕುವ ಆತುರ ಕಾತರಂ ನೋಡುತ್ತೆ
ತನ್ನೊಂದು ಹದವಿಲ್ಲದ ಬಾಳಿಗೆ ಇದೊಂದು
ಪಾಠವಲ್ತೆ ಎನುತೆದ್ದು ಪೊರಡಲಸುವಾಗಲ್
ಎಡವಕ್ಕದಲಿ ಹಬ್ಬಿದ ಶಾಲಿವನ ವನಧಿಯು
ಸುವಿಸ್ತೀರ್ಣದಲಿ ಕರ್ಮಗಾರರ ಹಿಂಡು ಮೈ
ಬಾಗಿ ಕೈಂಕರ್ಯದಲಿ ತೊಡಗಿರ್ದು ಮುದವೆರ್ಚಿ
ಮೈವೆರ್ಚಿ ಜಾನಪದ ಗೀತವಂ ಪಾಡುತಿರೆ,
ಚೆನ್ನಿಗಂ ಕಿವಿಗೊಟ್ಟು ಕೇಳಿ "ಆನಿಂತೊಂದು
ಬಳಗದೊಳ್ ಭಾಗಿಯಾಗದಿರ್ದುದರಿಂದಲ್ತೆ
ಬಡತನಂ ?" ಎನಲ್ ಸಂಕಟದಿಂದೆ.

ಬನದೇವಿ

"ಅಹುದು ಚೆನ್ನಿಗ ! ಕೇಳ್, ಎಂದುಮೆಂದಿಗೂ ನೀಂ
"ಸತ್ಯಮೇವ ಜಯತೇ" ಎಂತೋ ಅಂತೆಯೇ
"ಶ್ರಮಮೇವ ಜಯತೇ" ಎಂಬುದಂ ಅರಿತರಿತು
ನುರಿತು ಜೀವನಂ ಪರಿಪಕ್ವಗೊಳಿಸಿಕೊಳ್ಳು
ಶ್ರಮ-ಶ್ರಮ-ಶ್ರಮವನ್ನೆ ಶ್ರಮಿಸಿ ಪಿಂಡಿ
ನೀರಿಳಿಸದಿರ್ದೊಡೆಲ್ಲಿಯು ಮಾನವ ಜೀವನ ?
ನೀಂ ಮನದೊಳ್ ಭಾವಿಸಿ-ಮಥಿಸಿ ನೋಡಾ !
ಎನಲ್ಕೆ. ಕೆಲ ಚಣಂ ಮನದೆ ನಡುಗಿ ಬೆಮರಿಳಿಸಿ
ತನ್ನ ಪಾಲುಮಾರಿಕೆಯನುಂ ಪಳಿಪಳಿದು ಇಂ
ಜೀವನವ ಗೆಲ್ವೆನೆಂದು ನಯದಿಂ ಭಕ್ತಿಯಿಂ
"ತಾಯೆ ನಮೋನ್ನಮಃ !" ಎಂದು ನಮಿಸಿದನಾ ಬಡವಂ
ಮುಂದಣ ಸುದೂರದೂರ ಮಾರ್ಗಯೋಗದಿ ಕಣ್ಣಿಟ್ಟು !

—o—

# ರಾಜಾ ರವಿವರ್ಮನ ಚಿತ್ರಶಾಲೆ

ಹೊನ್ನ ಹೊತ್ತರೆಯ ತಿಳಿಬೆಳಕು ಮೆಲ್ಲಮೆಲ್ಲನೆ
ಕಿಟಕಿ ಬಾಗಿಲು ತಟ್ಟುವಂದದಿ, ಮಿಂಚೆ ಬರೆ,
ಪಸರಿಸಿತು ಜಗದಗಲ ಲೋಕಮೋಹಕವಾಗಿ!
ಪ್ರಾತಃಸೌಂದರ್ಯದಲಿ ಹಚ್ಚ ಹಸುರಿನ ಮೇಲೆ
ಪೊಳೆಪೊಳೆವ ರನ್ನದ ಎಳ ಲೇಪನವ ನೋಡಾ !
ಗಿಡು ಬಳ್ಳಿ ಮರಗಳಲಿ ಹುದುಗಿ ಹಾಡುವ ಪಕ್ಷಿ–
ಸಮಾಜದ ಕಲಕಂಠರುತಿಯು ಮೃದು ಮಾಧುರ್ಯ
ಮನಃಕುಟ್ಮಲಮಂ ಪುಗಲ್ ಭಾವರಸಧಾರೆ
ಧಮನಿ ಧಮನಿಯಲಿ ಹರಿದಾಡಿ ಮಂತ್ರಮಾಯದಿ
ಮೈಮನಗಳಂ ಹಿಡಿಮುರಿಗಟ್ಟಿದವೊಲಾಗೆ
ಜಗಮರೆತೆ ಪ್ರಾತಃಸೌಂದರ್ಯ ಸತ್ ಶಾಂತಿಯಲಿ !
ಪೊಳ್ತುರುಳ್ದುದು ಕಾಲಧರ್ಮನಂ ಬೆಂಬಿಡಿದು.
ಸುತ್ತಲೆಲ್ಲೆಡೆಯುಂ ಪಚ್ಚ ಪಸಿರ್ ತಂಗಾಳಿ
ಅಲೆಸದಿಂ ಎಲೆಎಲೆಗಳ್ ಮರ್ಮರಿಸಿ ಶ್ರುತಿಯಂ
ಮೀಂಟುತಿರೆ ನೋಡದೋ ಸ್ವರ್ಗಸುಧೆ ಭುವಿಗಿಳಿದು
ಬಂದುದೋ ಎನಲ್ ಪೊಳ್ತರೆ ಮಧುರಾತಿಮಧುರಂ !

ಓಮೋ ! ಎನಿತಂದಮೊ ಈ ಜಗತ್ ಸೃಷ್ಟಿಯಲಿ
ಬೃಹತ್ತರ ತಂತ್ರಂ ! ಸೃಷ್ಟಿ ಚಕ್ರಗಳ್ ಎನಿ–
ತೆನಿತು ನಿಯತಕಾಲಿಕೆ ! ಮಂತ್ರಮಾಯಮೊ ಎನಲ್
ಸೋಜಿಗಂ ! ಯೋಚನಾತೀತಂ ! ಅಜರಾಮರಂ !
ಸುವಿಚಾರ ವಿಪ್ಲವಂ ನಡೆದಿರೆ ಮಮಮಸ್ತಕ
ನಿರೇಜದಲಿ, ಎಲ್ಲಿಯು ಪರಾಮರ್ಶೆ ಪೇಳ್ !
ಮಂಕುದಿಣ್ಣೆಯೊಲ್ ನೋಳ್ಪುದಲ್ಲದೆ ಬೇರೇನೈ 

ಎಳೆಮಂಜು ಮುಸುಂಕಿರೆ ಎಲ್ಲೆಡೆಯುಂ ಬೆಳ್ಳನೆಯ
ನವಿರುದೆರೆಯುಂ ಬಿಡಿಬಿಡಿ ಎಳೆಯೆನೆ ಹರಡಿದೊಲ್!
ಇಂತಪ್ಪ ಪ್ರಾತಃಮಧುರ ಪಕ್ಷಿಗೊರಳುಲಿಯು
ಸುಪ್ರಭಾತವಂ ಆಲೈಸುತ್ತಾಲೈಸುತ್ತಲಿ
ರಾಜಾರವಿವರ್ಮನ ಚಿತ್ರಶಾಲೆಯು ದೂರ
ಪಥವಿಡಿದಾನು ನಡೆದಿರೆ ಚಿತ್ರದಲಿ ಎಂತಪ್ಪ
ಸ್ಫೂರ್ತಿಯೋ ಅಂತಪ್ಪ ಓಗರಂ ! ಆಗರಂ !
ಪಜ್ಜೆ ಪಜ್ಜೆಗುಂ ಪಥವಂ ಪಿಂತಿಕ್ಕಿದಾನುಂ
ಮುನ್ನಡೆಯೆ ಮಹಾ ಚಿತ್ರಶಾಲೆ ತಲೆವಾಗಿಲ–
ನೋಸರಿಸಿ ಸಂದರ್ಶಕರಂ ಬಲುವೆಯಿಂದಲಿ
ಸ್ವಾಗತಿಸಲ್ ಏನಾನಂದಂ ಮನಮುಹೋದಧಿಗೆ !
ಹಾ ! ಪಡಸಾಲೆಗೆ ಪದಾರ್ಪಣೆ ಮಾಡೆ ಒರ್ಮೆಗೇ
ದಿಗ್ಭ್ರಾಂತಿ ಆವರಿಸಿ ಮಂತ್ರಮುಗ್ಧಮಾದೊಲ್
ತನುಮನಂ ನಿಶ್ಚಲಂ ! ನಿಷ್ಕಲಂ ! ನಿಸ್ಪಂದಂ !

ಓ ! ಎನಿತೆನಿತು ದಿವ್ಯಮಾ ವರ್ಣಚಿತ್ತಾರ
ಪ್ರದರ್ಶನಂ ! ಅಹಹ, ಏಂ ಸೊಗವೊ ! ನಿಸರ್ಗ
ಸೌಂದರ್ಯಕೆ ಹೆಗಲೆಣೆಯೋ ಎನಲ್ಕೆ ರೂಪಿತ
ಚಿತ್ತಾರಗಳಾಕರ್ಷಣೀಯತೆಯಿಂ ಪ್ರಾಣ
ವಾಹಿನಿ ಘನಿಸಿ ತಲ್ಲಣಿಸಿ ನಿಜ ಭಾವಾಗ್ನಿಗೆ
ತಟ್ಟನೆ ನೆಯ್ಯನೆರಚಿದೊಲ್ ತಕಥೈ ! ತಕ್ಕಥೈ !!
ಅಲ್ತಲ್ತು, ಉಜ್ವಲಿಸುವ ಭಾವನಾಜ್ಯೋತಿ ಕಣ !
ಆದೊಡಂ ಮೂಕಮೌನ ಬೆಸೆದುದು ತುಟಿಗಳಂ
ಕಂಗಳಾಕರಂ ತಣಿಯದಿರಲ್ ಎವೆಯಿಕ್ಕದೆ
ವೀಕ್ಷಿಸುತಿರಲಲ್ಲಿ ಮನಃಚಿತ್ತವೊಂದಾಗಿ
ಸಿಂಹಾವಲೋಕನದಲಿರಲ್ ಬಾಯ್ದೆರೆವೆನೆನೆ
ಮಾತು ಮೈಲಿಗೆ ! ಗಂಟಲೊತ್ತಿರೆ ಕಟ್ಟುಸಿರಂ! →

ಮುಮ್ಮಾರ್ತಿನ ಬರಿ ವ್ಯರ್ಥಾಲಾಪಕಲ್ತೊ ಈ
ಮನೋಹರ ಶೈಲಿಯ ಚಿತ್ರಕಲಾ ದರ್ಶನಂ!

ಮೊಟ್ಟಮೊದಲ್ ನೆಟ್ಟ ನಿಟ್ಟಾಲಿಗೆ ಕಂಡುದು
ಉಯ್ಯಾಲೆಯಾಡುವ ಮನ ಮೋಹಿನಿಯ ಚಿತ್ತಾರ!
ಅಹಃ ಎಂತಹ ಅಮೋಘ ಕಲಾತ್ಮಕಮಾಸೃಷ್ಟಿ ?
ಧವಳ ಕಾಂತಿಯೊಸರ್ವ ಲಲಿತಮಾ ದುಕೂಲಂ,
ಬೆಂಗಾವಲಿಗೆ ಬಿಚ್ಚಿದ ಕರ್ರನೆ ಚಿಕುರರಾಶಿ !
ಕರ್ಪುಕೌಶೇಯ ಎಳೆಯೊಳ್ ನವುರು ನವುರಾದ
ನೀಳ ನೀಳಮಾ ಚಿಕುರ ರಾಶಿಯು ಸುಕೋಮಲ
ವಿನ್ಯಾಸಂ ಮೇಣ್ ಸೀರೆಯ ಸೆರಗಿನ ತುಯ್ದಾಟ
ಒಂದರೊಡನೊಂದು ಸ್ಪರ್ಧೆಗೆತ್ತುದೆನೆ ಸುಂದರ
ಪರಿವೇಶಂ ! ಬನದೇವಿಯುಡಿಯ ವಿವಿಧವರ್ಣ
ರಂಜಿತ ಕುಸುಮಾವಳಿಯ ವೈಭೋಗದಲಿ ಮಿಗೆ
ನಳನಳಿಪ ಬೆಳ್ದಳಿರ್, ಪೊಂದಳಿರ್, ಕೆಂದಳಿರ್
ಮುಂತಪ್ಪ ಸಿಂಗರಂ ಕೂಡಿರ್ದ ವನವಾರ್ಧಿ
ಮೈದಳೆದ ಚಿತ್ರಣಂ ಕುಂಚಬ್ರಹ್ಮನ ಕುಂಚಂ
ವಿರಚಿಸಿದ ಕಲಾನಿಧಿ ದಿವ್ಯಮಾ ರಸವೇಶಿ !
ನೋಳ್ಪನಿತು ಮೈಮನಂ ಉಸಿರ್ಗಟ್ಟೆ ಪಸುರ್ಗಟ್ಟೆ
ಜೀವ ತುಡಿಯುತಿದೆ ಭಾವೋದ್ವೇಗ ಮತ್ತೇರಿ !
ಜಗಮರೆತು ಮೈಮರೆತು ನಿಂದೆನ್ನೈ ಕಣ್ಣೆಟ್ಟು !
ಅಹ, ರಸಪ್ರಜ್ಞೆಗೌತಣಮಾವ ಎಂತಪ್ಪ
ಮಹೋನ್ನತ ರಚನಾ ಕರಕೌಶಲಂ ! ಏಂ ಭಾವ
ಮಾಧುರ್ಯಂ ! ಏಂ ಕಲಾತ್ಮಕ ದಿವ್ಯಸೌಂದರ್ಯಂ !
ರನ್ನಗನ್ನಡಿಯುಲೊಗೆದ ಪರ್ಣಾರ್ಣವದ ಪಡಿ
ಚಿತ್ತಾರಮೊ ಎನಲ್ಕೆ ಪೊದಳ್ದುದೀ ಅನನ್ಯ
ಮನೋರಮ ಚಿತ್ರಣಂ ! ರುಂದ್ರಾಟವಿಯ ಮಧ್ಯೆ →

ಉತ್ತರೋತ್ತರಣೆ–೯೫

ದೇವದಾರು ವೃಕ್ಷದ ನಿಡುಗೊಂಬೆಗೆ ಕಟ್ಟಿದ
ತೂಗುಯ್ಯಾಲೆಯ ಮೇಲೆ ಮೋಹನೀಯ ಮೋಹಿನೀ
ಮೂರ್ತಿ! ಮೆಯ್ಯ ಮಾಟ, ನೆಟ್ಟ ನೋಟ, ಸಿರಿಮೊಗದಿ
ಅರೆಮುಗುಳ್ದ ಮುಗುಳಿನ ಪರಿತೋಷ ಸಂಪದಂ !
ರಚಿತ ಚಿತ್ರವಾದೊಡದರಲಿ ನಿಜ ಜೀವ ಕಳೆ
ತುಂಬಿತುಳುಕುವ ಕೃತಿಗಾರು ನಿನಗೆ ಸುಶಾಂತ
ರೂಪದರ್ಶಿ ? ಸಾಕ್ಷಾತ್ ಮೋಹಿನಿಯೇ ಪೃಥ್ವಿ–
ಗಿಳಿತಂದಳೊ ಮತ್ತಾವ ಸಗ್ಗದ ರಂಭೆಯರ್
ಬಂದಿಲ್ಲಿ ತವ ಕುಂಚ ಕೌಶಲ್ಯಕೆದುರಿರ್ದು
ಇಂತಪ್ಪ ಜೀವಕಳೆ ತುಂಬಿದರೊ ಪೇಳಯ್ಯ !
ರಸ ಋಷಿಯೆ ! ಎಲ್ಲಿ, ಕಲಿತೈ ಶೋಡಶ ಕಳಾ
ಪೂರ್ಣ ವರಕಲೆಯಂ ? ನಿನಗಿಂ ಮಿಗಿಲಪ್ಪ ಗುರು
ಮಿರ್ದನೆ ತವ ಕೀರ್ತಿ ಪರಿಮಳಿಸೆ ಈ ಭುವಿಯಲಿ ?

ಹೇ ವರ್ಣ ಶಿಲ್ಪಿ ! ರಾಜರ್ಷಿ ! ತವಭಾವಾಗ್ನಿ
ಪೂತ ಕೃತಿರತ್ನಗಳ್ ಹಲಕೆಲವು ಮಾತ್ರಮೆ ?
ಬೃಹತ್ ಚಿತ್ರಶಾಲೆಯ ತುಂಬೆಲ್ಲಾ ಚೇತನಾ
ಚಿಲುಮೆಗಳೆ ! ನೋಳ್ಪ ಕಣ್ ಸೋಲ್ದು ಬೆನೆಗೊಂಡು
ಸುಖ ಮುಚ್ಚಿಗೊಳ್ವನಿತು ಸುರಮ್ಯತಾ ಸಂಪದಂ !
ಓವೊ ! ಪೇಳಲೇನಾ ರಸಾನುಭವ ಸಾರಂ !
ಸರ್ವತೋಮುಖ ಕಲಾ ಸಂಸ್ಪರ್ಶಿ ವೈಭವಂ
ಎಲ್ಲಿ ನೋಡಿದರಲ್ಲಿ ವಿವಿಧ ಚಿತ್ರಶ್ರೀಗಳ ಜೆಂಗಟ್ಟು !
ಇನ್ನೊಂದರಲಿ, ಶಕುಂತಲೆ ಜಿಂಕೆಯ ಬಳಿಯಲಿ
ನಿಂದ ಸತ್ಯ ಸುಂದರ ಚಿತ್ರ. ಹಚ್ಚ ಹಸುರಿನ
ಶಾಡ್ವಲಂ ಮುಂಬೆಳೆದ ಪಚ್ಚನೆಯ ಪಸುರಪ್ಪ
ರನ್ನಗಂಬಳಿಯ ಹಸೆ. ಹಿನ್ನೆಲೆಯಲಿ ಪೂವೊತ್ತ
ಗಿಡುಮರಗಳ ಸುಂದರ ಚಿತ್ತಾರ. ಶಕುಂತಲೆ →

ಎನಿತು ಭಾವನಾ ಶೀಲೆ ? ಆನಂದ ಜ್ಯೋತಿಯಿಂ
ಪ್ರದೀಪ್ತ ಕಂಗಳ ಅನುಶೀಲನೆ ! ನಲ್ಮೆಯಿಂ
ನೋಂಪಿಯಿಂ ಸುಂದರ ಸಾರಂಗಿಯ ಮಸ್ತಕದ
ಮೇಲೆ ಅಭಯಹಸ್ತವೂರಿದ ಚೆಲುವಿನ ಭಂಗಿ !
ಹಾ ! ಬಣ್ಣಿಪೆನೆ ಚಿತ್ರಮತೀ ಶೋಭೆಯಂ ಪೇಳ್ !
ಶೋಭೆಯನ್ನೆ ಶೋಭಿಸುವ ಮನೋರಮಾ ಶೈಲಿ !

ಅದೋ, ನೋಡಾ ಚಿತ್ರಣಂ ! ಬೈಗುಗೆಂಪಿನ ಕನಕ
ಕಾಂತಿಯುಬ್ಬುಗೆಯಂ, ಪಶ್ಚಿಮ ದಿಗಂತದಲಿ
ಅಸ್ತಮಾನ ರವಿಯ ವೈಭವೋಪೇತ ದೃಶ್ಯಂ !
ಬೆಳ್ಮೋಡದೆರೆಯಂ ಹರಿದು ತೂರಿ ಬರ್ಪ ರವಿ
ಕಿರಣಗಳ ವರಸೌಂದರ್ಯಜಾಲಂ. ದೈನಂದಿನ
ನಿಜ ಚಿತ್ರವಂ ಸೆರೆವಿಡಿದ ಅದ್ಭುತ ಕೌಶಲ್ಯ
ದೈವದತ್ತ ಕಣ ! ಚಿತ್ರಕಲ್ಪಮಥನ ಕಣ್ಣಾ !
ತವ ಅಮೂಲ್ಯಕಲೆ ರಾಷ್ಟ್ರೀಯ ಕೀರ್ತಿ ಕಳಸಂ !
ಮೇಣ್ ಬ್ರಹ್ಮರ್ಷಿ ಭಾವ ಸಾಮ್ರಾಜ್ಯ ಮಾಧುರೀ !
ಅಹ, ಅಲ್ಲಿ, ಆ ಚಿತ್ರ ! ಘನನಿಬಿಡ ಕಾನನದ
ಮಧ್ಯೆ, ಬೃಹತ್ ಶಿಲಾ ಪೀಠಸ್ಥ ತಪೋನಿಧಿ
ವೇದರ್ಷಿ ! ಮುನಿಪನಾ ತೇಜಸ್ಸು ಮೈಕಟ್ಟು
ಮೇಣ್ ಕಣ್ ಮುಗಿದ ತಪೋಭಂಗಿ ! ಮೋಕ್ಷ ತಾಂಡವ
ಪ್ರದರ್ಶನಮಂ ಅಳೆಯಲಕ್ಕುಮೇ ಈ ಅಕ್ಷಿ ?

ಅದೊ, ಆ ಬಲಗಡೆಯ ಚಿತ್ತಾರ, ವಿಶ್ವಾಮಿತ್ರಂ
ಮೇನಕೆ–ಶಿಶು ಶಕುಂತಲೆಯುರಂ ನಿರಾಕರಿಪ
ಸತ್ಯಕಠೋರ ಶೈಲಿಯ ಚಿತ್ರ ! ಬೃಹದ್ ವೃಕ್ಷ
ಶ್ರೇಣಿ ! ನಳನಳಿಪ ತಳಿರಿನ ಮಹಾ ಸಾಮ್ರಾಜ್ಯ !
ಪ್ರಕೃತಿ ವೈಶಿಷ್ಟ್ಯಂ ತಪೋವನ ಸುಂದರಂ !
ನೋಡಿದನಿತೂ ತಣಿಯದಿಹ ಭಾವಿಸಿದನಿತೂ →

ಮುಗಿಯದಿಹ ಮಾನವಕೃತ ಮಹೋನ್ನತ ಮಧುರ
ಚಿತ್ರಶ್ರೇಣಿ ! ಚಿತ್ರದಿಂ ಚಿತ್ರಕೆ ಮುಂಬರಿಯೆ
ಮಂತ್ರಮುಗ್ಧ ಮನದಾಕರೆ ಮುಗಿವುದೇ ಪೇಳ್ ?

ಓ ಇಲ್ಲಿ ಶೈವಾಲ ಜಾಲರಹಿತ ಥಳಥಳ
ಥಳಿಪ ನೀಲ ಜಲನಿಧಿ ಸಂಮೃದ್ಧ ಪುಷ್ಕರಣಿ !
ದಂಡೆಯಲಿ ಬಂಡೆಬಂಡೆಯನೊಟ್ಟ ಮಂಡೆಯೆನೆ
ರೂಪುಗೈದ ಬಂಡೆಗಳದೊಂದು ಸುಂದರ ವೇಷಂ !
ತೀರದಲಿ ಬಿಂದಿಗೆಗಳಂ ಪೇರಿಸಿಟ್ಟು ತಾಂ
ಮೈಬಾಗಿ ನೀರ್ಮೊಗೆವ ರುಕ್ಮಿಣಿಗೆ ಕೈ ನೀಡಿ
ಸಹಾಯಕನಾಗಿರ್ಪ ಶ್ರೀಕೃಷ್ಣ ಚಿತ್ರಣ !
ಎಡಗಡೆ ಗಗನಚುಂಬೀ ಕಲ್ಪವೃಕ್ಷಗಳ ಹಂತಿ.
ಕಾರ್ಗಾಳಿಯು ಬಲೋಲ್ಲಾಸದಲ್ಲೋಲದಿಂ
ತಲೆ ಬಾಗುತಿಹ ಮರಮರಗಳ ಪ್ರದರ್ಶನಂ !
ಕೆನ್ನೀಲ ಗಗನಾಂಗಣದಿ ಹಾರುವ ಕೋಗಿಲೆ
ಕಾಜಾಣಗಳ ರೆಕ್ಕೆ ಬಿಚ್ಚಿದ ಕರಿಯ ಸಾಲು.
ಸುಂದರ ಮನೋಭಾವ ಸುಂದರ ಕೃತಿ ಪೂರಕಂ.
ನಡೆದೆ ಮುಂದಣ ಚಿತ್ರದೆಡೆಗೆ, ಓ ! ಏನೆಂಬೆ ?
ಚಕ್ರವರ್ತಿ ದುಶ್ಯಂತನ ನಿರೀಕ್ಷೆಯೊಳ್ ಬಳಲಿ
ವಿರಹಾಗ್ನಿಯಿಂ ದಹಿಸಿ ತೊಟ್ಟು ಕಳೆದ ಪೂವಿನೊಲ್
ಬಾಡಿದ ತರಳೆ ಶಕುಂತಳೆ ಪರ್ಣ ಕುಟಿಯ ಬಳಿ
ಹೆಮ್ಮರದ ಬುಡದಲಿ ಕುಳಿತು ಪತ್ರಲೇಖನದ
ಚಿತ್ರಣಂ ! ಎದೆಯ ನೋರೆಯಂ ಬರೆಯೆ ಶಬ್ದಗಳೇ
ತಿಳಿಯದೆ ಗಲಿಬಿಲಿಗೊಂಡ ಮನದ ಚಿಂತಾ ಭಂಗಿ !
ದೂರವೆಟ್ಟನ ಮೇಲೆ ಕಣ್ಣಿಟ್ಟು ಪಿರಿದಪ್ಪ
ಭಾವಭಾರದಲಿ ಮೈಮರೆತು ಕುಳಿತ ದೃಶ್ಯ !
ಬಳಿಯಲೀರ್ವರು ಸಾಂತ್ವನಗೈವ ಗೆಳತಿಯರ್ ;

ಶಕುಂತಲೆಯ ಮುಖ ಭಾವದಲಿ ಪೊದಳ್ದ ನಿಜ
ಚಿಂತನಾವೇಶವೆನಿತು ಸಹಜಂ ! ಇಂತಪ್ಪ
ಸಹಜ ಸುಂದರತರಂ ಅಪೂರ್ವಂ ! ಅನರ್ಘ್ಯಂ !

ಅಲ್ಲಿ, ಆ ಎಡೆಯಲ್ಲಿ ಕಾರ್ಮೋಡ ಮುಸುಂಗಿರೆ
ನೇಸರ ಕಿರಣಂಗಳ್ ಮರ್ಬಿನಂಚಿನಲಿ ಕೋಲು
ಕೋಲಾಗಿ ಪೊಮ್ಮುವ ನಿತ್ಯ ಸುಂದರ ದೃಶ್ಯಮಂ
ಕಿರಿಯ ಕುಂಚದಲಿ ಸೆರೆವಿಡಿದು ಗಗನದ್ದೇಶ
ನೀಲನೀಲ ವಿಸ್ತಾರಮಂ ಚಿತ್ರೀಕರಿಸಿದ ನಿಪುಣಂ !
ಮೇಣದರ ಬಳಿಯೊಳ್ ಕಲ್ಪನಾ ಮಾತ್ರದಲಿ
ದಿವ್ಯ ಭೂಮಾನುಭೂತಿಯಂ ಮಥಿಸಿ ಮಂತ್ರಿಸಿ
ಜೋಗುಳಿಸಿಹನೋ ಎನಲ್ಕೆ ಉಷೆವೆಳಗು ತಣ್ಣನೆ
ತಾವರೆ ತುಟಿಗೆ ಮುದ್ದಿಟ್ಟು ತಾನಾದುದು ಪುಣ್ಯ
ಸ್ವಾಪ್ನರೇಖಾಮಯಂ ! ಅತ್ತ ಕೃಷ್ಣ ಶಿಲೆಯಂ
ಸುತ್ತುವರಿದ ಪಚ್ಚನೆಯ ಶಾಡ್ವಲಂ ಕೌಶೇಯ
ಎಳೆಗಳೊಳ್ ಮೈಯೊಡೆದ ಕೌತಕಂ ಏಂಚನ್ನು !
ಮೇಣಲ್ಲಿ, ಸದಾ ಲೀಲಾಲೋಲ ಸಂಯಾತ್ರಿ
ಪುಣ್ಯಾನಿಲದ ರಾಸಲೀಲೆಯಾಮೋದದಿಂ
ಪೊದಳ್ದೊಂದು ಅಪೂರ್ವ ಪರಿದೃಶ್ಯಮಾನಮೆನೆ
ಕಮಲಿನಿಯಲಿ ಸ್ವಚ್ಛ ನೀರಿನಲೆಗಳ್, ಅತುಲ
ನೈದಿಲೆಗಳ್, ಮೇಣಂಚಿನ ಗರಿಕೆಯೆಸಳುಗಳ್
ಬಾಗಿದ ಸಹಜ ಸುಂದರ ದೃಶ್ಯಂ ಎನಿತೆನಿತು
ಆಕರ್ಷಣೀಯಂ ರಸಪೂರ್ಣ ದೃಷ್ಟಿಗೆ
ಸರಸ ಸರಳ ಚಿತ್ತಾರಂ ! ಅದೋ ಆಗಳ್ತೆ
ನೋಡದಿರ್ದೊಂದು ಚಿತ್ತಾರಂ ಈಗಳ್ ನೋಡೆ,
ಏಂ ಮಹತ್ತರಂ ? ಲಕ್ಷ್ಮಿ ಸರಸ್ವತಿಯರ್ ನಿಂತ
ನಿಲುವಿನೊಳ್ ಪೊದಳ್ದ ಅಪೂರ್ವಮಪ್ಪ ಚಿತ್ತಾರ ! →

ಅಹಃ ಘನಸೌಂದರ್ಯ ಲಕ್ಷ್ಮಿಯರ ಸಕಲ ಶೋಡಷ
ಕಳೆಗಳೊರ್ಮೆಗೇ ಬಂಡೆದ್ದು ವೈವೆತ್ತವೊಲ್
ಧವಳಾಂಬರ ಧಾರೀ ಆನಂದ ಸಂಸ್ಪರ್ಶಿ
ಮಾತೃಕಾ ಮೂರ್ತಿಗಳ ರೂಪದರ್ಶಿ ಆರೈ ?
ಅಂದಿಂದಿನನುಭವಂ ಸ್ಮೃತಿ ಸಾಮ್ರಾಜ್ಯದೊಳ್
ಘನಿಸಿದ ತೆರಂ ಚಿತ್ರಿತವಾದುದೇ ಆರ್ಯ ?

ಪ್ರಾತಃಸಮಯದ ಗಗನ ದಿಗಂತ ನೀಲಿಮಾ
ಕ್ಷೇತ್ರದಲಿ ಒಯ್ಯೊಯ್ಯನೆ ತೇಲುವ ಪಯೋನಿಧಿ
ಸಮೂಹಂ ಗೆಯ್ದು, ಕ್ಷಣಿಕ ಗೋಪುರಗಳಿಗೊಂದು
ಮಹತ್ತರ ಸ್ಥಾಯೀ ರೂಪಲ್ತೆ ತವ ಚಿತ್ರಣಂ ?

ಹರಿದ್ರ ಕನಕ ಕೇಸರಿ ತಾಮ್ರಾರುಣ ನೀಲ
ವರ್ಣವರ್ಣೀಯ ಮೇಘಲೋಕಂ ಕಲ್ಪನಾ
ಅಪ್ಸರೆಯರಂ, ನಾರುಮುಡಿಯ ಮುನಿರಿಷಿಗಳಂ,
ಧೀರ ಭಂಗಿಯ ಧೂರ್ಜಟಿಯುಂ ಮುಂತಪ್ಪ ಕಲಾ
ಜಗತ್ತಿನ ಚಿತ್ರಪ್ರದರ್ಶನದ ದರ್ಶನದಿಂ
ಮನದುಂಬಿ ಆನಂದ ಪೂತ ಹೃದಯದಿಂ
ನಮಿಸುವೆನೈ ಮತ್ತೆ ಮತ್ತೆ ವರ್ಣಶಿಲ್ಪಿಯೆ !
ಮತ್ತಿಲ್ಲಿ, ಶ್ರೀಕೃಷ್ಣ ರಾಯಭಾರಂ ! ರಾಜಾ
ಕೌರವೇಂದ್ರನ ಮುಂದೆ ಸಂಧಿಸೂತ್ರ ನಡೆಸುವ
ಭಂಗಿ ಕಣಾ ! ಕುರುಕುಲದ ಪೌತ್ರ ದುಶ್ಯಾಸನಂ
ಭುಗಿಲೆದ್ದು ಕ್ರೋಧೋದ್ದೀಪ್ತತೆಯಿಂ ಖಡ್ಗಮಂ
ಹಿರಿಯೆ, ಗೆಣೆಯ ವಿದುರಂ ಪ್ರತಿರೋಧ ತೋರಲ್,
ಶ್ರೀಕೃಷ್ಣ ಎಳೆಮುಗುಳ್ ಮುಲರ್ಚಿ ತಳ್ಕೈಸುವ
ರಾಯಭಾರ ಸಮಗ್ರ ಸಂಕ್ಷೋಭೀ ಚಿತ್ರಣಂ !

ಬರಿಮಾತಿನ ವ್ಯರ್ಥಾಲಾಪಕಲ್ತೊ ಈ
ಸುಮನೋಹರ ಶೈಲಿಯ ಚಿತ್ರಕಲಾ ದರ್ಶನಂ !

ಮನಃಸ್ಫೂರ್ತಿಯಿಂ ಸಾರಸರ್ವಸ್ವಮಂ ಬಸಿದು
ಜೀರ್ಣಿಸಿಕೊಳೆ ಅಹ, ಅಮೋಘಮಾ ರಸಾನ್ನ !

ಸಸಾವಿರದೆಂಟನೂರ ನಲವತ್ತೆಂಟರ
ಏಪ್ರಿಲ್ ಇಪ್ಪತ್ತೊಂಭತ್ತರಲಿ ತಿರುವಾಂಕೂರ್
ರಾಜಮನೆತನದ ಅರಮನೆ ಕಿಲಿಮನೂರಿನಲಿ
ಸಂಜನಿಸಿದಂ ರಾಜಾ ರವಿವರ್ಮ ! ಭಾರತದ
ಕೀರ್ತಿಶಿಖರ ತಾನ್ನೈಸಿ !! ಪುಟ್ಟನಿಂ ರಾಜನಿರೆ
ಗೈಯ್ಮೆಯಿಂ ರಾಜಾಧಿರಾಜನ್ನೈ ರವಿವರ್ಮ !
ಬಾಲ್ಯದೊಳ್ ಸಂಸ್ಕೃತ ವಿದ್ಯೆ ಮೇಣ್ ಸಂಗೀತ
ವಿದ್ಯೆ ಮೇಣ್ ಚಿತ್ರಕಲೆಗಳಂ ಕಲಿತು ಭವ್ಯ
ಭವಿಷ್ಯಕೆ ಭದ್ರ ತಳಹದಿಯನಿಡೆ ಜನನಿ ತಾಂ
ಪುರಾಣೀಯ ಕಥೆಗಳಂ ಚಿತ್ರವಶ್ಶಾಗಿ
ಮುಂದಿಡುತಿರೆ ಮನವೊಗ್ಗ ಅರಳರಳ ಚಿತ್ತಂ
ಮಥಿಸಿ ಮಥಿಸಿ ಕಲ್ಪನೆಯ ಜೆಂಕೆ ಕೆರಳುತಿರಲ್
ಬಾಲಕ ರವಿವರ್ಮ ಚಟುವಟಿಕೆಯ ಬೀಡಾಗಿ
ಪುಟಪುಟಿಯ ತೊಡಗಿದಂ ಸೆಂಡಿನೊಲ್ ! ಆಗಳಾ
ಮಾತೆ ನಲವಿಂ ಸಂತಸದಿಂ ಇನಿದಿನಿದಾಗಿ
ರಾಮಾಯಣ, ಭಾಗವತ, ಮಹಾಭಾರತ
ಮಹದ್ಗ್ರಂಥಗಳ ಗಂಭೀರ ಕತೆಗಳಂ ತಿಳಿ
ಭಾಷೆಯೊಳ್ ವಿವರಿಸುತಿರಲದರ ರೇಖಾ ಚಿತ್ರಂ
ಮೂಡಿಸುವನಾ ಬಾಲ ಕುಂಚಬ್ರಹ್ಮ ಸುಂದರ
ಶೈಲಿಯಲಿ ! ಮುಂಬೆಳೆದುದಿಂತೆ ಮನ ಬಲಿವನ್ನ
ಬುದ್ಧಿ ಬಲಿವನ್ನ. ಸಕಲ ರಾಗರಸಂಮೊಲಿದು
ದಮನಿಗಳಲಿ ಹರಿದು ತಾರುಣ್ಯಭವಿ ಮೈಗೊಳಲ್,
ರಾಜಕುಲತಿಲಕ ಶ್ರೀರಾಮವರ್ಮ ಐಲ್ಯನ್
ಕುಲಪುತ್ರಂಗೆ ಸಕಲ ಸೌಕರ್ಯಮೊದವಿಸಿ, →

ಬೆನ್ನಟ್ಟಿ ಪ್ರೋತ್ಸಾಹಿಸಿ ಜೀವಕಳೆ ತುಂಬಿದಂ !

ಹೇ, ರಾಜರ್ಷಿ ! ವರಲಕ್ಷ್ಮಿಯ ತೊಟ್ಟಿಲಲಿ ಜನಿಸಿ
ಕೀರ್ತಿವೊಡೆದೆ ಸುಲಭದಲಿ ! ಪಿರಿಯ ಕಲಾವಿದರ
ಕುಂಚಕೌಶಲ್ಯಮಂ ಗಮನಿಸುತ ಕವಕಲಾ
ತಪೋವಹ್ನಿ ಜ್ವಾಲೆಗೆ ನೆಯ್ಯನೆರೆಯೆ, ನಿನ್ನಂ
ನಾರೈದು ರಾಜಮಹಾರಾಜರುಂ ಒಲವಿಂ
ಪರಮ ಗೌರವದಿಂ ಬರೆಯಿಸಿ ತಮ್ಮಿಚ್ಛೆಯಂ
ಪೂರೈಸಿ ತವಪೆಸರ ಕೀರ್ತಿಶಿಖರಂ ಬೆಳಸಿ
ಶ್ರೀರಕ್ಷೆಯಿಂ ಪರಿಚಯಿಸಿದರ್ ತ್ರಿಲೋಕಕೆ !
ದೇಶವಿದೇಶಗಳಲಿ ತೊಳಗಿ ಬೆಳಗಿದ ನಿನ್ನಯ
ಕೀರ್ತಿ ಪರಿಮಳಂ ಎಂದುಮೆಂದಿಗೂ ಉಳಿವೊಲ್
ಇಂದಿನ ಜನಾಂಗ ಮೇಣ್ ಪ್ರಭುತ್ವ ಕಲೆಗಾಗಿ
ಕಲೆಯಂ ಉಳಿಸಿ ಸಂರಕ್ಷಿಸದಿರ್ದೊಡೆ ಎಂಥ
ಅಪಕೀರ್ತಿ ಹೇಳಾ ಕಲಾವಂತಿಕೆಗೆ ಮೇಣ್
ಭಾರತ ರಾಷ್ಟ್ರಕೆ ! ನಿನ್ನ ಕೀರ್ತಿ ಸರ್ವತ್ರ ಸದಾ
ಉಳಿವವೊಲ್ ಕಲಾಶಾಲೆಯಲಿ ಕಾಪಿಡಲಕ್ಕು !
ಪ್ರದರ್ಶನಕಿಡಲಕ್ಕು ! ದೇಶವಿದೇಶಗಳ
ಜನ ನೋಡಿ ನೆನೆವಂತು ! ತೋಷದಿಂ ನಲಿವಂತು !

ಈವೊಳ್ತು ನಿನ್ನ ನೆನೆನೆನೆಯಲೀ ಕವಯತ್ರಿ
ರಚಿತವಾದುದೀ ಕಿರುಕವನ ಸರಳಮಾಲಾ !

—o—

## ಮಲ್ಲಿಕಾ ಕೃತಿಗಳು

(ಕವಿತಾ ಸಂಕಲನ)

೨೩) ಗಗನ ಕುಸುಮ
೨೪) ಜೀವನ ಕುಸುಮ
೨೫) ಕಸ್ತೂರಿ ಮಾಲಿಕಾ
೨೬) ಮಂದಾರ ಮಾಲಿಕಾ
೨೭) ಚಂಪಕ ರಾಜಿ
೨೮) ಬಕುಳ ರಾಜಿ
೨೯) ವಿಜಯ ಗಾಥಾ
೩೦) ಗಾನ ತೀರ್ಥ
೩೧) ನಾದ ಬಿಂದು
೩೨) ಕಲ್ಯಾಣ ಭಾರತಿ (ಅಚ್ಚಿನಲ್ಲಿ)
೩೩) ಕಾವ್ಯಾನಂದ ನಂದಿನಿ
೩೪) ಭಾವಾನಂದ ನಂದಿನಿ

(ಸಂಜೀವನ ಕಾವ್ಯ)

೩೫) ರಾಗಾನುರಾಗಿಣಿ
೩೬) ಉತ್ತರೋತ್ತರಣಿ
೩೭) ಮಂಗಳ ಭಾರತಿ

(ಗದ್ಯ ಕಾವ್ಯ)

೩೮) ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೩೯) ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೪೦) ದೂರ ದೇಶದಲ್ಲಿ
೪೧) ಬೆಳದಿಂಗಳ ರಾತ್ರಿ
೪೨) ವಿಶೇಷ ಸುದ್ದಿ
೪೩) ರಂಗನ ಸಾಹಸ
೪೪) ಓಹಿಯೋಜ ಸರೋವರ
೪೫) ಕೌಶಿಕನ ಗೊಂಬೆ

---

ಲಕ್ಷ್ಮೀ ಪ್ರಕಾಶನ
170, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು-560 025